# ಅಚಲ

ಫೆಬ್ರವರಿ 2000

ತಿಂಗಳ ಪತ್ರಿಕೆ

## ಒಳಗೇನಿದೆ ?



ಜಾಗೃತಿ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 14 ಸಂಚಿಕೆ - 2

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಬಿ. ಎನ್. ಸುಮಿತ್ರಾಬಾಯಿ
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


**Achala - Edited by**
**Dr. N. Gayathri**

**Published by**
**Dr. G. Ramakrishna on behalf of Jagruthi Mahila Adhyayana Kendra**

***Printed at***
**Lipi Mudrana**
**Bangalore - 560 004**


ಆತ್ಮೀಯರೇ,

ಕಳೆದ 14 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

**ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ.ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ. ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.**

ಅಚಲದ ಚಂದಾ ವಿವರಗಳು ಹೀಗಿವೆ :

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

ಗಮನಿಸಿ

ಅಚಲ ವಿಳಾಸ ಬದಲಾಗಿದೆ

108, ಸ್ಕೈಲೈನ್ ಸುರಭಿ, 14-ಬಿ, ವಿದ್ಯಾಪೀಠ ರಸ್ತೆ, ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಹೊಲಸಿನ ವಿಜೃಂಭಣೆ ನಿಲ್ಲಲಿ

ಇದು ಸಮೂಹ ಮಾಧ್ಯಮಗಳ ಯುಗ. ಒಳಿತೋ ಕೆಡುಕೋ ಏನೇ ಆಗಿರಲಿ, ಒಂದು ವಿಷಯವನ್ನು ಮಾಧ್ಯಮ ಮಹತ್ವವೆಂದು ಪರಿಗಣಿಸಿದರೆ ಅದನ್ನು ಜನಸಾಮಾನ್ಯರ ಕೈಗೆಟುಕಬಲ್ಲ, ಕಿವಿಗೆ ಕೇಳಿಸಬಲ್ಲ ಸರಕಾಗಿಸಬಲ್ಲದು. ಚಲನಚಿತ್ರಗಳ, ದೃಶ್ಯ ಮಾಧ್ಯಮಗಳಲ್ಲಿನ 'ಅಶ್ಲೀಲತೆ' ಇಂದು ಅಂತಹ ಒಂದು ವಸ್ತುವಾಗಿದೆ. ಈ ಹಿನ್ನೆಲೆಯಲ್ಲಿ ಇತ್ತೀಚೆಗಷ್ಟೇ ಶತದಿನೋತ್ಸವ ಆಚರಿಸಿದ 'ಉಪೇಂದ್ರ' ಚಿತ್ರ ತನ್ನ ಎಲ್ಲ ಕೊಳಕು ಸಂಭಾಷಣೆ, ದೃಶ್ಯ ಚಿತ್ರಗಳೊಂದಿಗೆ ಇಂದಿನ ಸಮಾಜದ ಹೊಲಸಿನ ರಾಡಿಯನ್ನು ನಮ್ಮ ಕಣ್ಣಿಗೆರಚುತ್ತದೆ. ಸರಕು ಸಂಸ್ಕೃತಿಯ ಇಂದಿನ ಸಂದರ್ಭದಲ್ಲಿ ಈ ಚಿತ್ರದ ನಾಯಕಿ ನೇರವಾಗಿ ತನ್ನ ದೇಹವನ್ನೇ ಮಾರಾಟಕ್ಕಿಡುವುದಲ್ಲದೆ, ಎಲ್ಲ ದುಡಿಯುವ ಮಹಿಳೆಯರಿಗೂ ಅನ್ವಯಿಸುವ ಅಸಹ್ಯ ಮಾಡುಗಳನ್ನಾಡುತ್ತಾಳೆನ್ನುವುದು ಆಕ್ಷೇಪಣೆಯ ಅಂಶ. ಈ ವಿಷಯಗಳನ್ನು ಪ್ರಸ್ತಾಪಿಸಿ, ಪತ್ರಿಕೆಗಳಲ್ಲಿ ಪ್ರತಿಭಟನೆಯ ಎಳೆಗಳು ಕಾಣಿಸಿಕೊಂಡಿವೆ. ಹಾಗೆಯೇ ಬೆಂಗಳೂರು, ಗುಲ್ಬರ್ಗ ಮತ್ತು ಕೆಲವೆಡೆಗಳಲ್ಲಿ ಪ್ರತಿಭಟನೆಯ ಪ್ರದರ್ಶನಗಳೂ ನಡೆದಿವೆ.

ಇಲ್ಲಿ ಮುಖ್ಯ ಪ್ರಶ್ನೆಯೆಂದರೆ, 'ಉಪೇಂದ್ರ' ದಂತಹ ಹೊಲಸು ಚಿತ್ರ ಮಹಿಳೆಯನ್ನು ತುಂಬಾ ಕೀಳಾಗಿ ಕಂಡಿರುವುದನ್ನು ಕೇವಲ ಮಹಿಳೆಯರಷ್ಟೇ ಪ್ರತಿಭಟಿಸಬೇಕು, ಎಂದೇನೂ ಇಲ್ಲ. ಹಾಗೆ ಮಹಿಳೆಯರ ಪ್ರತಿಭಟನೆ ಸಾಲದೆಂಬ ಆಕ್ಷೇಪಣೆ, ದೂರುಗಳು ಮತ್ತೆ ಮತ್ತೆ ಕೇಳಿ ಬರುತ್ತಲಿವೆ. ಮಹಿಳೆಗೆ ಸಂಬಂಧಪಟ್ಟ ದೌರ್ಜನ್ಯ ಅವಹೇಳನಗಳಿಗೆ ಇಡೀ ಸಮಾಜವೂ ಕಾರಣಕರ್ತರಾದ್ದರಿಂದ ಮಾನವೀಯತೆಯುಳ್ಳ ಎಲ್ಲ ಪ್ರಗತಿಪರರು ಇದನ್ನು ಪ್ರತಿಭಟಿಸಬೇಕಾದ್ದು ಮುಖ್ಯ. ಇದು 'ಉಪೇಂದ್ರ' ಚಿತ್ರದ ಪ್ರಶ್ನೆ ಮಾತ್ರವಲ್ಲ. ಇಂತಹ ಹತ್ತು ಹಲವು ಅಸಭ್ಯ ಅಶ್ಲೀಲ ಚಿತ್ರಗಳಿಗೆ ಕೇವಲ ನಿರ್ಮಾಪಕ ಮಾತ್ರ ಹೊಣೆಯೇ ? ಇಂತಹ ಚಿತ್ರ ವೀಕ್ಷಿಸುವ ಜನಸಾಮಾನ್ಯರ ಅಭಿರುಚಿಯ ಬಗ್ಗೆ ಹೇಳುವುದೇನೂ ಇಲ್ಲವೇ ? ಇಂತಹ ಚಿತ್ರವನ್ನು ನಿರ್ದೇಶಿಸುವವನು, ಹಂಚಿಕೆದಾರ, ವೀಕ್ಷಕ ಇವರೆಲ್ಲ ತಮ್ಮ ಸುಪ್ತ ಮನಸ್ಸಿನ ಆಕಾಂಕ್ಷೆಗಳಿಗೆ ಚಿತ್ರದಲ್ಲಿ ಮೂರ್ತ ಸ್ವರೂಪ ಕೊಡುವಂಥವರೇ ? ಇವು ಕೂಡ ಅತ್ಯಂತ ಗಂಭೀರವಾಗಿ ಯೋಚಿಸಬೇಕಾದ ವಿಷಯ.

'ಉಪೇಂದ್ರ' ದಂಥ ಚಿತ್ರಗಳಿಗೆ ಎಂತಹ ಗಿರಾಕಿಗಳಿರುತ್ತಾರೆನ್ನುವುದಕ್ಕೆ ಅವು ಇಂದಿನ ಟಿ. ವಿ. ಯುಗದಲ್ಲೂ ಶತದಿನೋತ್ಸವ ಆಚರಿಸುತ್ತಿರುವುದೇ ಸಾಕ್ಷಿ. ಹಾಗಾದರೆ, ಜನಸಾಮಾನ್ಯನ ಅಭಿರುಚಿಯನ್ನು ತಿದ್ದುವಲ್ಲಿ ಸಮಾಜದ, ಸರ್ಕಾರದ ಜವಾಬ್ದಾರಿಯೇನೂ ಇಲ್ಲವೆ? ಹೆಂಡ ಮಾರುವಂತೆ ಇಂತಹ ಚಿತ್ರಗಳೂ ಮಾರುಕಟ್ಟೆಗೆ ಬಂದಿವೆಯಷ್ಟೇ !

ದೃಶ್ಯ ಮಾಧ್ಯಮಗಳಲ್ಲಿ ಲೈಂಗಿಕತೆ, ಕ್ರೌರ್ಯವನ್ನು ನಿಷೇಧಿಸುವಂತೆ ಸರ್ಕಾರ ವಹಿಸಬೇಕಾದ ಎಚ್ಚರ ಎಲ್ಲಿ ಹೋಗಿದೆ ? ಅವರು ರೂಪಿಸಿರುವ ನೀತಿ ಸಂಹಿತೆ, ಸೆನ್ಸಾರ್ ಬೋರ್ಡ್‌ಗಳು ಎಲ್ಲಿ ಕೆಲಸ ಮಾಡುತ್ತಿವೆ? ಸೆನ್ಸಾರ್ ಬೋರ್ಡಿನ ಕಣ್ಣು ತಪ್ಪಿಸಿ ಇಂತಹ ಸಿನಿಮಾಗಳು ಬಂದಿದ್ದರೆ ಸೆನ್ಸಾರ್ ಬೋರ್ಡು ಎಂತಹ ನೈತಿಕ ಜವಾಬ್ದಾರಿಯನ್ನು ಹೊತ್ತುಕೊಳ್ಳಲು ಸಿದ್ಧವಿದೆ ? ಇವೂ ಕೂಡ ಚಿತ್ರಮಂದಿರದ ಮುಂದೆ ನಿಂತು ಮಾಡುವ ಪ್ರತಿಭಟನೆಯಷ್ಟೇ ಗಂಭೀರವಾಗಿ ಕೇಳಿಕೊಳ್ಳಬೇಕಾದ ಪ್ರಶ್ನೆಗಳು.

ವೇಗವಾಗಿ ಜಾಗತೀಕರಣದತ್ತ, ಉದಾರೀಕರಣದ ಬಲೆಯಲ್ಲಿ ಸಿಲುಕಿ ಧಾವಿಸುತ್ತಿರುವ ಜನಸಾಮಾನ್ಯ ಮಾರುಕಟ್ಟೆಯ ಸರಕುಗಳಾಗಿ ಲಾಭ/ನಷ್ಟಗಳತ್ತ ಮಾತ್ರ ನೋಟವಿರಿಸಿ ಸಾಗುತ್ತಿರುವ ಸಂದರ್ಭದಲ್ಲಿ ನಾವಿರುವ ಪರಿಸರ ಎಷ್ಟೊಂದು ಹೊಲಸಾಗಿದೆ, ಎಷ್ಟೊಂದು ವಾಣಿಜ್ಯಮಯವಾಗಿದೆ ಎಂಬುದನ್ನೂ ಗಮನಿಸಬೇಕು. 'ಉಪೇಂದ್ರ' ಚಿತ್ರ ಮಾತ್ರ ಹೊಲಸಲ್ಲ, ಇಂದು ನಾವು ನೋಡುವ ಹಲವಾರು ಟಿ. ವಿ. ಛಾನೆಲ್‌ಗಳು ಬಿತ್ತರಿಸುತ್ತಿರುವ ಚಿತ್ರ ಭಯಂಕರ ಭವಿಷ್ಯವನ್ನು ತೋರಿಸುತ್ತವೆ. ಯುವ ಜನಾಂಗದ ಅಭಿರುಚಿಯನ್ನು ಅವರು ಧಾವಿಸುತ್ತಿರುವ ವೇಗವನ್ನು ತೋರಿಸುತ್ತವೆ. ಇಂತಹ ವಿಷಯಗಳು ಸರ್ಕಾರದ ಆಸಕ್ತಿಗಳಾಗಿರುವುದಿಲ್ಲ. ಬದಲಿಗೆ ಜನಸಾಮಾನ್ಯರು ಎಚ್ಚೆತ್ತು ಕೊಳ್ಳಬೇಕಾದ ಅನಿವಾರ್ಯತೆಯನ್ನೂ ಇದು ತೋರಿಸುತ್ತದೆ. ಅದಕ್ಕೆ ಮುಂಚೆ ಹೊಲಸಿನ ವಿಜೃಂಭಣೆ ನಿಲ್ಲುವಂತೆ ನಾವೆಲ್ಲರೂ ಅಗತ್ಯವಾಗಿ ಕಾಯ್ದುಕೊಳ್ಳಬೇಕಾಗಿದೆ.

- ಎನ್. ಗಾಯತ್ರಿ

# ಕ್ಯೂಬಾದಲ್ಲೊಂದು ಮೌನ ಕ್ರಾಂತಿ

- ಜಿ.ಎನ್. ಮೋಹನ್

ಹವಾನಾದ ಸುಂದರ ಕಡಲ ತೀರದ ನಗರ, ಪ್ಲಾಯಾದಲ್ಲಿ ನಾನಿದ್ದ ಮನೆ ಡಾಕ್ಟರ್‌ಗಳದ್ದು. ಗಂಡ ಹೆಂಡತಿ ಇಬ್ಬರೂ ವೈದ್ಯರು. ಕಣ್ಣುಜ್ಜಿ ನಾನು ಹೊರಬರುವ ವೇಳೆಗೆ ಅಡುಗೆ ಮನೆಯಲ್ಲಿ ಡಾ|| ಜುಸ್ಸೋ ಮ್ಯಾನ್ಯುಯಲ್ ಸೊಂಟಕ್ಕೆ ಏಪ್ರನ್ ಕಟ್ಟಿಕೊಂಡು ಕಚ ಕಚ ಮಾಂಸ ಕತ್ತರಿಸಿ, ಮೊಟ್ಟೆ ಹುರಿದು ಮುಗಿಸಿ ಪಾತ್ರೆ ತೊಳೆಯುತ್ತಾ ನಿಂತಿರುತ್ತಿದ್ದರು.

ಉತ್ಸವದ ಕಲಾಪ ಮುಗಿಸಿ ಸಂಜೆ ನಾನು ಮನೆಗೆ ಬಂದಾಗ ಪುನಃ ಅದೇ ಕೆಲಸ. ಆದರೆ ಈ ಬಾರಿ ಜುಸ್ಸೋ ಜಾಗದಲ್ಲಿ ಡಾ|| ಓಲಿವಾ ರೊಮಿರೋ. ಈ ದೃಶ್ಯ ನಾನಿದ್ದ ಮನೆಯ ಎದುರಿಗಿದ್ದ ಶಿಕ್ಷಕ ದಂಪತಿಗಳ ಮನೆಯಲ್ಲಿ, ಪಕ್ಕದಲ್ಲಿದ್ದ ಮತ್ತೊಬ್ಬ ವೈದ್ಯ ದಂಪತಿಗಳ ಮನೆಯಲ್ಲಿ ನಡೆಯುತ್ತಿದ್ದ ನಿತ್ಯಯಾತ್ರೆ.

ಬೆಳಗ್ಗೆ ಕಚೇರಿಗೆ ಹೋಗುವವರೆಗೆ ಗಂಡ ಅಡುಗೆಯ ಮನೆಯಿಂದ ಆರಂಭಿಸಿ ಎಲ್ಲಾ ಕೆಲಸಗಳ ಉಸ್ತುವಾರಿ ನೋಡಿಕೊಂಡರೆ ಪುಟ್ಟ ಮಕ್ಕಳನ್ನು ಕರೆದುಕೊಂಡು ಬಾಲವಾಡಿ, ಶಾಲೆಗಳಿಗೆ ಮುಟ್ಟಿಸಿ ಹೋಗುತ್ತಿದ್ದ ಹೆಂಡತಿ ಕಛೇರಿಯಿಂದ ಬಂದ ನಂತರ ಈ ಕೆಲಸಗಳನ್ನು ತಾನು ಕೈಗೆತ್ತಿಕೊಳ್ಳುತ್ತಿದ್ದಳು.

ಕ್ಯೂಬಾದಲ್ಲಿ ಸದ್ದಿಲ್ಲದೆ ಸಾಗಿರುವ ಬದಲಾವಣೆ ಇದು. ಇದನ್ನೇ ಫಿಡೆಲ್‌ಕ್ಯಾಸ್ಟ್ರೋ 'ಕ್ರಾಂತಿಯೊಳಗಿನ ಕ್ರಾಂತಿ' ಎಂದು ಬಣ್ಣಿಸಿದ್ದಾರೆ. ಕ್ರಾಂತಿ ನಡೆಸುವುದು ಎಷ್ಟು ಕಷ್ಟವೋ ಹಾಗೆಯೇ ಈ ಪುರುಷ ಕೇಂದ್ರಿತ ಸಮಾಜವನ್ನು ತಿದ್ದಿ ದಾರಿಗೆ ಹಚ್ಚುವುದೂ ಅಷ್ಟೇ ಶ್ರಮದಾಯಕ ಎಂಬುದು ಫಿಡೆಲ್ ಅವರ ಅಭಿಪ್ರಾಯ. ''ಕ್ಯೂಬಾ ಎಲ್ಲ ದೇಶಗಳಂತೆಯೇ ಪುರುಷ ಕೇಂದ್ರಿತ ಆಲೋಚನೆಗಳನ್ನು ಹೊಂದಿತ್ತು. ಇಲ್ಲಿ ಶತಮಾನ ಕಾಲ ಕಾರುಬಾರು ನಡೆಸಿದ ಸ್ಪೇನ್‌ನಿಂದಾಗಿ ಸಾಕಷ್ಟು ಈ ದೃಶ್ಯಗಳು ಬಳುವಳಿಯಾಗಿ ಬಂದಿವೆ. ಆದರೆ ಇದನ್ನು ಸವಾಲಾಗಿ ಸ್ವೀಕರಿಸಿ ಲಿಂಗಭೇದವನ್ನು ತೊಡೆದಿದ್ದೇವೆ. ಸಂಪೂರ್ಣವಾಗಿ ಈ ಬೇಧ ಇಲ್ಲವಾಗಿದೆ ಎಂದು ನಾನು ಹೇಳುತ್ತಿಲ್ಲ. ಆದರೆ ಲ್ಯಾಟಿನ್ ಅಮೇರಿಕಾದ ಇತರೆ ದೇಶಗಳಿಗೆ ಹೋಲಿಸಿದರೆ ಕ್ಯೂಬಾ ಸಾಕಷ್ಟು ಬದಲಾಗಿದೆ. ಇತರೆ ಯಾವ ದೇಶಗಳೂ ಸಹಾ ಈ ಲಿಂಗ ತಾರತಮ್ಯವನು ಕಿತ್ತೊಗೆಯಲು ಮಾಡದಷ್ಟು ಅಪಾರ ಕೆಲಸವನ್ನು ಕ್ಯೂಬಾ ಮಾಡಿದೆ. ನಾವು ಸಾಕಷ್ಟು ಹೆಜ್ಜೆ ಈ ನಿಟ್ಟಿನಲ್ಲಿ ಮುಂದೆ ಇಟ್ಟಿದ್ದೇವೆ. ಇದು ಹೊಸ ಜನಾಂಗದ ಮಧ್ಯೆ ಎದ್ದು ಕಾಣುತ್ತಿದೆ. ನಾವು ಈ ತಾರತಮ್ಯದ ವಿರುದ್ಧ ಬೃಹತ್ ಸೆಣಸಾಟ ನಡೆಸಿದ್ದೇವೆ, ಪ್ರಗತಿ ಸಾಧಿಸಿದ್ದೇವೆ, ಫಲಿತಾಂಶ ಪಡೆದಿದ್ದೇವೆ. ಆದರೆ ನಾವು ಈ ಹೋರಾಟವನ್ನು ನಿಲ್ಲಿಸದೆ ನಡೆಸುತ್ತಲೇ ಇರಬೇಕು''.

ಕ್ಯೂಬಾದಲ್ಲಿ ಈ ಮೌನಕ್ರಾಂತಿ ನಡೆಯುತ್ತಿರುವುದು ಹೆಜ್ಜೆ ಹೆಜ್ಜೆಗೆ ಅರಿವಾಗುತ್ತದೆ. ತಲೆಮಾರುಗಳು ಬದಲಾದಂತೆ ದೃಷ್ಟಿಕೋನವೂ ಬದಲಾಗುತ್ತ ಬಂದಿರುವುದು ಪ್ರತೀ ಹಂತದಲ್ಲಿ ಗೋಚರಿಸುತ್ತದೆ. ಮಹಿಳೆಯರನ್ನು ಕ್ಯೂಬಾದ ದೈನಂದಿನ ಜೀವನದಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಗುವಂತಹ ಎಲ್ಲಾ ಪ್ರಾಥಮಿಕ ಸೌಕರ್ಯಗಳನ್ನು ಕಲ್ಪಿಸಿಕೊಡಲು ಕ್ಯೂಬಾ ಆದ್ಯತೆ ನೀಡಿದೆ. ಕೆಲಸದ ಹೊರೆಯಡಿ ಕುಸಿದು ಹೋಗದ ಹಾಗೆ ತನ್ನ ವೈಯಕ್ತಿಕ ಚಿಂತನೆಗೆ ನೀರೆರೆದು ಬೆಳೆಸುವ ಹಾಗೆ ಸಾಕಷ್ಟು ಸಮಯದ ಅವಕಾಶವನ್ನು ಕ್ಯೂಬಾ ಕಲ್ಪಿಸಿಕೊಟ್ಟಿದೆ. ಐದು ವರ್ಷದೊಳಗಿನ ಮಕ್ಕಳಿಗೆ ಬಾಲವಾಡಿಗಳು, ಐದು ವರ್ಷದ ನಂತರವಾದರೆ ಶಾಲೆಗಳು, ಮನೆಯಲ್ಲಿ ವೃದ್ಧರಿದ್ದರೆ ಅವರನ್ನು ನೋಡಿಕೊಳ್ಳಲು, ಅವರೂ ತಮ್ಮ ಸಮಯವನ್ನು ಹೊರಗೆ ಕಳೆಯುವಂತಾಗಲು ವೃದ್ಧರ ಕೇಂದ್ರಗಳನ್ನು ನಡೆಸುತ್ತಿದೆ. ಎಷ್ಟೋ ಮಕ್ಕಳು ವಸತಿ ಶಾಲೆಗಳಲ್ಲಿದ್ದಾರೆ.

ಹೀಗಾಗಿ ಕ್ಯೂಬಾದ ಮಹಿಳೆ ಸತತ ಕೆಲಸದ, ಸಂಬಳವಿಲ್ಲದ ಅಗಾಧ ಕೆಲಸದ ಗುಲಾಮಳಾಗಿಲ್ಲ. ಬದಲಿಗೆ ಪುರುಷರಿಗೆ ಸರಿಸಮರಾಗಿ ಕ್ಯೂಬಾದ ಬೆಳವಣಿಗೆಗೆ ತಮ್ಮ ನೋಟಗಳನ್ನು ನೀಡಿದ್ದಾರೆ. ಕ್ಯೂಬಾದ ಎಲ್ಲಾ ರೀತಿಯ ಬೆಳವಣಿಗೆಗೆ ತನ್ನ ಕಾಣ್ಕೆಯನ್ನು ನೀಡಿದ್ದಾಳೆ.

''ದೇಶದ ತಾಂತ್ರಿಕ ಸಿಬ್ಬಂದಿಯ ಶೇ. 60 ಭಾಗ ಮಹಿಳೆಯರು. ಅವರಿಗೆ ಸಂಬಳದಲ್ಲಿ ಯಾವುದೇ ತಾರತಮ್ಯವಿಲ್ಲ. ಜಗತ್ತಿನ ಇತರೆ ದೇಶಗಳಲ್ಲಿ ಈಗಲೂ ಇರುವಂತೆ ವೇತನ ತಾರತಮ್ಯ ಕ್ಯೂಬಾದಲ್ಲಿ ಇಲ್ಲ. ಮಹಿಳೆಯರು ಇಲ್ಲಿ ಸ್ವತಂತ್ರರಿದ್ದು ಉದ್ಯೋಗದ ಅವಕಾಶಗಳನ್ನು ಹೊಂದಿದ್ದಾರೆ. ರಕ್ಷಣೆ, ಶಿಕ್ಷಣ, ಆರೋಗ್ಯಕ್ಕೆ ಗಮನ ನೀಡಲಾಗಿದೆ'' ಎನ್ನುತ್ತಾರೆ ಫಿಡೆಲ್.

ಕ್ಯೂಬಾದಲ್ಲಿ ಕಣ್ಣಿಗೆ ಒಡೆದು ಗೋಚರಿಸುವ ಮತ್ತೊಂದು ಸಂಗತಿ ಎಂದರೆ ಮಹಿಳೆ ಕೇವಲ ವೃತ್ತಿನಿರತಳಲ್ಲ, ಆಕೆ ಅಭಿಪ್ರಾಯ ರೂಪಿಸುವವಳೂ ಹೌದು. ಎಷ್ಟೋ ದೇಶಗಳಲ್ಲಿ ಉದ್ಯೋಗ ನೀಡಿ ಕೈತೊಳೆದುಕೊಂಡಿರುವಾಗ ಇದನ್ನೇ ಸಮಾನತೆ ಎಂದು ಬಿಂಬಿಸುತ್ತಿರುವಾಗ ಕ್ಯೂಬಾ ಪ್ರಜ್ಞಾಪೂರ್ವಕವಾಗಿ ಹಲವು ಹೆಜ್ಜೆಗಳನ್ನು ಇರಿಸಿದೆ. ಮಹಿಳೆ ಇಲ್ಲಿ ಮನೆಗೆ ಮತ್ತೊಂದು ಆದಾಯ ತರುವವಳು

ಮಾತ್ರವಾಗದೆ ದೇಶವನ್ನು ಕಟ್ಟುವ ಪ್ರತೀ ಹಂತದಲ್ಲಿ ತನ್ನ ಅಭಿಪ್ರಾಯವನ್ನು ಮಂಡಿಸುವವಳಾಗಿದ್ದಾಳೆ. ಕ್ಯೂಬಾದಲ್ಲಿ ಮಹಿಳೆಯರು ಆಡಳಿತದ ಚುಕ್ಕಾಣಿ ಹಿಡಿದಿದ್ದಾರೆ. ಜನ ಪ್ರತಿನಿಧಿಗಳಾಗಿದ್ದಾರೆ. ಹಲವು ಸಂಸ್ಥೆಗಳಲ್ಲಿ ಪ್ರಧಾನ ಹುದ್ದೆಯಲ್ಲಿದ್ದಾರೆ. ಆರೋಗ್ಯ, ಶಿಕ್ಷಣ, ಪ್ರವಾಸೋದ್ಯಮ, ವಿಜ್ಞಾನ ತಂತ್ರಜ್ಞಾನ, ಕೃಷಿ ಹೀಗೆ ಎಲ್ಲ ರಂಗದಲ್ಲೂ ಮಹಿಳೆ ತನ್ನ ಛಾಪನ್ನು ಒತ್ತುವ ವಾತಾವರಣ ಸೃಷ್ಟಿಯಾಗಿದೆ.

ಹಲವು ದೇಶಗಳಲ್ಲಿ ಮಹಿಳೆಗೆ ರಾಜಕೀಯ ಮೀಸಲಾತಿಗೆ ಹೋರಾಟ ನಡೆಯುತ್ತಿರುವ ಈ ಸಂದರ್ಭದಲ್ಲಿ ಕ್ಯೂಬಾ ಮಹಿಳೆಯರಿಗೆ ರಾಜಕೀಯ ಪ್ರವೇಶಿಸುವ ಅವಕಾಶವನ್ನು ಕಲ್ಪಿಸಿ ಮಾದರಿಯಾಗಿದೆ. ವಿಶ್ವದ ಮಹಿಳಾ ಸಂಸದೀಯ ಸದಸ್ಯರ ಸರಾಸರಿ ಸಂಖ್ಯೆ ಶೇ. 10ರಷ್ಟಿದ್ದರೆ ಕ್ಯೂಬಾದಲ್ಲಿ ಈ ಸಂಖ್ಯೆ 22.8. ಇತ್ತೀಚೆಗೆ ಅಂತರ್‌ರಾಷ್ಟ್ರೀಯ ಕಾರ್ಮಿಕ ಸಂಘ (ಐಎಲ್‌ಓ) ನಡೆಸಿದ ಸಮೀಕ್ಷೆ ಮಹಿಳೆಯರು ಪುರುಷರಿಗೆ ಸರಿಸಮವಾಗಿ ಆರ್ಥಿಕ ಹಾಗೂ ರಾಜಕೀಯ ಅಧಿಕಾರ ಹಿಡಿಯಲು ಕನಿಷ್ಠ 500 ವರ್ಷಗಳು ಬೇಕು ಎಂದು ಅಭಿಪ್ರಾಯಪಟ್ಟಿದೆ. ಆದರೆ ಕ್ಯೂಬಾ ಮಹಿಳೆಯರಿಗೆ ಸಮಾನ ಅವಕಾಶ ಕಲ್ಪಿಸುವಲ್ಲಿ ಹಲವು ಹೆಜ್ಜೆಗಳನ್ನು ಕ್ರಮಿಸಿಯಾಗಿದೆ.

ಆಡಳಿತ, ಉದ್ಯೋಗ ಅವಕಾಶ ಮಾತ್ರವೇ ಅಲ್ಲದೆ ತನ್ನ ದೇಹದ ಮೇಲಿನ ಹಕ್ಕನ್ನೂ ಕ್ಯೂಬಾದಲ್ಲಿ ಹೊಂದಿದ್ದಾರೆ. ಯಾವ ವಯಸ್ಸಿಗೆ ಮದುವೆಯಾಗಬೇಕು. ಗಂಡಿನ ಆಯ್ಕೆ ಮಹಿಳೆಯ ಕೈಯಲ್ಲಿದೆ. ಇಷ್ಟೇ ಅಲ್ಲದೆ ಮಕ್ಕಳನ್ನು ಹಡೆಯುವಲ್ಲಿ ಮಕ್ಕಳ ನಡುವಿನ ಅವಧಿಯ ಅಂತರದಲ್ಲಿ ಮಹಿಳೆಯ ನಿರ್ಧಾರ ಪ್ರಮುಖ.

ಕ್ಯೂಬಾದಲ್ಲಿ ಗರ್ಭಪಾತ ಮಹಿಳೆಯ ಹಕ್ಕು. ಇದಲ್ಲದೆ ಮದುವೆಯಾಗಿ ಪಡೆದ ಮಕ್ಕಳು, ಮದುವೆಯಾಗದೆ ಪಡೆದ ಮಕ್ಕಳ ನಡುವೆ ಯಾವುದೇ ವ್ಯತ್ಯಾಸವನ್ನು ಸರ್ಕಾರ ಮಾಡಿಲ್ಲ. ಶಾಲೆಗೆ ಮಕ್ಕಳನ್ನು ಸೇರಿಸುವಾಗ ಅರ್ಜಿಯಲ್ಲಿ ಯಾವುದೇ ಮುಜುಗರ ಅನುಭವಿಸಬೇಕಾದ ಕೊಕ್ಕೆಗಳಿರುವುದಿಲ್ಲ.

ಕ್ಯೂಬಾದ ಮೇಲೆ ಸದಾ ಯುದ್ಧಕತ್ತಿಯನ್ನು ಝಳಪಿಸುವ ಅಮೇರಿಕಾದಲ್ಲಿನ ಮಹಿಳೆಯರ ಸ್ಥಿತಿಯ ಜೊತೆ ಈ ಅಂಕಿ ಅಂಶಗಳನ್ನು ಇಟ್ಟು ನೋಡಲು ಕ್ಯೂಬಾಗೆ ಸದಾ ಹೆಮ್ಮೆ. ಅಮೇರಿಕಾದಲ್ಲಿ ನ್ಯಾಷನಲ್ ಅಸೋಸಿಯೇಷನ್ ಆಫ್ ವಿಮೆನ್ ಎಕ್ಸಿಕ್ಯುಟಿವ್ಸ್ ಪ್ರಕಟಿಸಿದ ಸಮೀಕ್ಷೆಯ ಪ್ರಕಾರವೇ ಕೆಲವು ಕ್ಷೇತ್ರಗಳಲ್ಲಿ ಮಹಿಳೆಯರು ಅಷ್ಟೇ ಕೆಲಸ ಮಾಡಿ ಪುರುಷರಿಗಿಂತ ಶೇ. 25 ಕಡಿಮೆ ಸಂಬಳ ಪಡೆಯುತ್ತಾರೆ. ಅಮೇರಿಕಾದ ಪ್ರಮುಖ 500 ಕಂಪನಿಗಳಲ್ಲಿ ಜವಾಬ್ದಾರಿಯುತ ಸ್ಥಾನಗಳಲ್ಲಿ ಮಹಿಳೆಯರ ಸಂಖ್ಯೆ ಕೇವಲ ಶೇ. 2.6. ಪುರುಷರಿಗಿಂತ ಹೆಚ್ಚು ಮಹಿಳಾ ಮತದಾರರು ಇದ್ದರೂ ಸಹಾ ಹೌಸ್ ಆಫ್ ರೆಪ್ರೆಸೆಂಟಿಟೀವ್ಸ್‌ನಲ್ಲಿ ಮಹಿಳೆಯರ ಸಂಖೆ ಶೇ. 6 ಹಾಗೂ ಸೆನೆಟ್‌ನಲ್ಲಿ ಶೇ. 11. ಇದಲ್ಲದೆ ಅಮೇರಿಕಾದ 50 ರಾಜ್ಯಗಳ ಪೈಕಿ 23 ವಿಧಾನಸಭೆಯಲ್ಲಿ ಮಹಿಳಾ ಪ್ರತಿನಿಧಿಗಳೇ ಇಲ್ಲ. ದೇಶದ 50 ಗವರ್ನರ್ ಕಚೇರಿಗಳ ಪೈಕಿ 46ರಲ್ಲಿ ಮಹಿಳೆಯರೇ ಇಲ್ಲ.

ಜನರ ನೋಟವನ್ನು ತಿದ್ದುವ ಕೆಲಸ ಸುಲಭದ್ದಲ್ಲ ಎನ್ನುವ ಕಾರಣಕ್ಕಾಗಿಯೇ ಕ್ಯೂಬಾದಲ್ಲಿ ನಡೆದಿರುವುದು ಮತ್ತೊಂದು ಕ್ರಾಂತಿಯೇ. ಮಹಿಳೆಯರಿಗೆ ಸಮಾನ ಅವಕಾಶ ನೀಡುವ ಕೆಲಸವನ್ನು ಕ್ಯೂಬಾ ಎಷ್ಟು ಜವಾಬ್ದಾರಿಯುತವಾಗಿ ನಿರ್ವಹಿಸಿದೆಯೆಂದರೆ ಮಹಿಳೆಯರಿಗೆ ಶಿಕ್ಷಣದಲ್ಲಿ ಎಲ್ಲಾ ರೀತಿಯ ಶಿಕ್ಷಣದಲ್ಲಿ ಸಮಪಾಲು ಸಿಗುವಂತೆ ನೋಡಿಕೊಳ್ಳುತ್ತದೆ. ಶಿಕ್ಷಣದ ನಂತರ ಒಂದೇ ರೀತಿಯ ಉದ್ಯೋಗದಲ್ಲಿ ಮತ್ತು ಈ ರೀತಿಯ ಕೆಲಸಕ್ಕೆ ಮಾತ್ರ ಲಾಯಕ್ ಎಂಬ ಹಣೆಪಟ್ಟಿ ಬಾರದ ರೀತಿಯಲ್ಲಿ ನೋಡಿಕೊಳ್ಳಲು ಆರಂಭದಲ್ಲಿಯೇ ವಹಿಸುವ ಈ ಎಚ್ಚರ ಪ್ರಮುಖಪಾತ್ರ ವಹಿಸುತ್ತದೆ. ಈ ಕಾರಣದಿಂದಾಗಿಯೇ ಮಹಿಳೆಯರು ಇಂದು ಎಲ್ಲಾ ರಂಗದಲ್ಲಿ ಹರಡಿಹೋಗಿದ್ದಾರೆ.

ಸಂಶೋಧನಾ ರಂಗದಲ್ಲಿ ಶೇ. 42ರಷ್ಟು ವಿಜ್ಞಾನ ರಂಗದಲ್ಲಿ ಶೇ. 43ರಷ್ಟು, ಇತರ ಮುಂದುವರಿದ ರಂಗಗಳಲ್ಲಿ ಶೇ. 53ರಷ್ಟು, ಉನ್ನತ ಶಿಕ್ಷಣದಲ್ಲಿ ಶೇ. 45ರಷ್ಟು, ಅಧ್ಯಾಪಕರಾಗಿ ಶೇ. 59ರಷ್ಟು ಮಹಿಳೆಯರು ಇದ್ದಾರೆ. ಮತ್ತು ಈ ಸಂಖ್ಯೆ ಕುಸಿಯದಂತೆ ಅತಿ ಎಚ್ಚರಿಕೆಯನ್ನೂ ಸರ್ಕಾರ ಹೊಂದಿದೆ.

ಕ್ರಾಂತಿಯ ತರುವಾಯ ಕ್ಯೂಬಾ ಮಾಡಿದ ಮೊತ್ತಮೊದಲ ಕೆಲಸದಲ್ಲಿ ಪ್ರಮುಖವಾದದ್ದು ಮಹಿಳೆಯರನ್ನು ದೇಶದ ಚಿಂತನೆಯಲ್ಲಿ ತೊಡಗಿಸುವ ಪ್ರಯತ್ನ. ಈ ಕಾರಣಕ್ಕಾಗಿಯೇ 1960ರಲ್ಲಿಯೇ ಕ್ಯೂಬನ್ ವಿಮೆನ್ ಪೆಡರೇಷನ್ ಸ್ಥಾಪಿಸಲಾಯಿತು. ಈ ಫೆಡರೇಷನ್ ಮಹಿಳೆಯರ ಸಾಕ್ಷರತೆಗೆ ಒತ್ತು ನೀಡಿತು. ಮೊದಲು ಅಆಇಈ ಕಲಿಯಲು, ನಂತರ ಆರನೆಯ ತರಗತಿಯವರೆಗೆ ಓದು ಮುಂದುವರಿಸಲು, ಆಮೇಲೆ ಕ್ಯೂಬಾದಲ್ಲಿ ಕಡ್ಡಾಯ ಹಂತವಾದ 9ನೆಯ ತರಗತಿಯವರೆಗೆ ಹೆಜ್ಜೆಹಾಕಲು ಈ ಸಂಘಟನೆ ಭುಜ ನೀಡಿತು.

ಈಗ ಕ್ಯೂಬಾದ ಜನಸಂಖ್ಯೆಯಲ್ಲಿ ಶೇ. 49.7 ಮಹಿಳೆಯರು. ಈ ಪೈಕಿ ಶೇ. 61 ಮಂದಿ ತಾಂತ್ರಿಕ ಶೇ. 72 ಮಂದಿ ಆರೋಗ್ಯ, ಶೇ. 68 ಮಂದಿ ಶಿಕ್ಷಣ, ಶೇ. 46 ವಿಜ್ಞಾನಿಗಳು. ಕಾಲೇಜಿನಿಂದ ಪದಪೀಧರರಾಗಿ ಹೊರಬೀಳುತ್ತಿರುವವರ ಪೈಕಿ ಮಹಿಳೆಯರ ಸಂಖ್ಯೆ ಪುರುಷರಿಗಿಂತಲೂ ಹೆಚ್ಚು.

— ಸಧ್ಯದಲ್ಲಿಯೇ ಪ್ರಕಟವಾಗಲಿರುವ 'ನನ್ನೊಳಗಿನ ಹಾಡು-ಕ್ಯೂಬಾ' ಪುಸ್ತಕದಿಂದ

# ಹದಿನೆಂಟನೇ ಶತಮಾನದ ಗಣಿತಜ್ಞೆ - ಎಮಿಲಿ ದು ಶಾಟೆಲೆ

ನೇಮಿಚಂದ್ರ

ನಾಲ್ಕನೇ ಶತಮಾನದಲ್ಲಿದ್ದ ಮಹಾನ್ ಗಣಿತಜ್ಞೆ ಹಿಪಾಟಿಯಾ, ದಾರುಣ ರೀತಿಯಲ್ಲಿ ಕೊಲೆಯಾಗಿ ಸತ್ತ ಶತಮಾನದೊಳಗೆ ರೋಮ್ ನಗರದ ಪತನವಾಯಿತು. ಅದಾದ ಒಂದು ಸಾವಿರ ವರ್ಷಗಳಿಗೂ ಹೆಚ್ಚು ಕಾಲ ಪಶ್ಚಿಮದ ಗಣಿತ ಮತ್ತು ವಿಜ್ಞಾನ ರಂಗಗಳಲ್ಲಿ ಹೆಚ್ಚೇನೂ ಪ್ರಗತಿ ಕಾಣಲಿಲ್ಲ. ಮಧ್ಯಕಾಲದ ಕೊನೆಗೆ ಪರಿಸ್ಥಿತಿ ಬದಲಾಯಿತು. ಕೋಪರ್ನಿಕಸ್ ಮತ್ತು ಕೆಪ್ಲರ್ ಗ್ರಹಗಳ ಚಲನೆಯನ್ನು ಕುರಿತಂತೆ ಪ್ರಮುಖ ಬೆಳಕು ಕಂಡವು. ಹದಿನೇಳನೇ ಶತಮಾನದಲ್ಲಿ ಐಸಾಕ್ ನ್ಯೂಟನ್ ಈ ಎಲ್ಲ ಹೊಸ ವಿಚಾರಗಳನ್ನು 'ಪ್ರಿನ್ಸೀಪಿಯಾ' ಎಂಬ ಬೃಹತ್ ಗ್ರಂಥದಲ್ಲಿ ಸಂಗ್ರಹಿಸಿ ಆಧುನಿಕ ವಿಜ್ಞಾನದ ಹರಿಕಾರನಾದನು. ಇದಾದ ಕೊಂಚ ಸಮಯ, ಚರಿತ್ರಕಾರರು 'ಜ್ಞಾನೋದಯ'ದ ಕಾಲವೆಂದು ಗುರುತಿಸುವ ಸಂದರ್ಭದಲ್ಲಿ ಎಮಿಲಿ ಹುಟ್ಟಿ, ಬಾಳಿ ಬದುಕಿ ದುಡಿದಳು. ಈಕೆ ಫ್ರಾನ್ಸ್ ದೇಶದ ಗಣಿತಜ್ಞೆ ಮತ್ತು ಭೌತಶಾಸ್ತ್ರಜ್ಞೆ.

ಎಮಿಲಿ 1706ರಲ್ಲಿ ಶ್ರೀಮಂತ ಕುಟುಂಬದಲ್ಲಿ ಜನಿಸಿದಳು. ಈಕೆ ಎಳೆಯ ವಯಸ್ಸಿನಲ್ಲಿಯೇ ಇಂಗ್ಲೀಷ್, ಲ್ಯಾಟಿನ್ ಮತ್ತು ಇಟಲಿ ಭಾಷೆಗಳಲ್ಲಿ ಪ್ರವೀಣಳಾದಳು. ಗಣಿತದಲ್ಲಿ ಪಾರಂಗತಳಾದಳು. 'ಜ್ಞಾನೋದಯ' ಕಾಲದಲ್ಲಿ ಅತಿ ಕ್ರಿಯಾಶೀಲವಾಗಿ ಭಾಗವಹಿಸಿದಳು. ಎಮಿಲಿ ಕಾಲದಲ್ಲಿ ಸಾಮಾನ್ಯವಾಗಿ ಶ್ರೀಮಂತ ಫ್ರೆಂಚ್ ಮಹಿಳೆಯರು ಐದನೇ ವರ್ಷಕ್ಕೆ ಕಾನ್ವೆಂಟ್ ಸೇರಿ, ಹತ್ತನೇ ವರ್ಷಕ್ಕೆ ಹಿಂತಿರುಗಿ ಒಂದು ವಿವಾಹವಾಗುತ್ತಿದ್ದರು. ಆದರೆ ಎಮಿಲಿಯ ಬುದ್ಧಿವಂತಿಕೆ ಅಸಾಧಾರಣವಿತ್ತು. ಎಮಿಲಿ ಸಾಧಾರಣ ರೂಪದ ಹುಡುಗಿ. ಐದು ಅಡಿ ಒಂಭತ್ತು ಇಂಚುಗಳ ಆಳೆತ್ತರ. ಅವಳ ರೂಪು ಮತ್ತು ಎತ್ತರದಿಂದಾಗಿ ಆಕೆಯ ಕುಟುಂಬ ಎಮಿಲಿಗೆ ಮದುವೆಯೇ ಆಗುವುದಿಲ್ಲ ಎಂದು ಭಾವಿಸಿದ್ದರು. ಆ ಕಾರಣದಿಂದಲೇ ಆಕೆ ಅವಿವಾಹಿತಳಾಗಿ ಜೀವನ ಕಳೆಯಲು ಬೇಕಾದ ಸಕಲ ಸಿದ್ಧತೆಗಳು ನಡೆದಂತಿತ್ತು. ಚಿಕ್ಕ ವಯಸ್ಸಿನಿಂದಲೇ ಎಮಿಲಿಗೆ ಒಳ್ಳೆಯ ಪ್ರಾಧ್ಯಾಪಕರನ್ನು ನೇಮಿಸಿದರು. ಕುದುರೆ ಸವಾರಿಯನ್ನು ಕಲಿಸಿದರು. ಆದರೆ ಬಾಲ್ಯದಲ್ಲಿ ಇಷ್ಟೆಲ್ಲ ತಯಾರಿ ನಡೆದರೂ ಎಮಿಲಿ ಹದಿನೈದು ವರ್ಷ ತುಂಬುತ್ತಿದ್ದಂತೆ ತಟ್ಟನೆ ಸುಂದರ ಯುವತಿಯಾಗಿ ರೂಪುಗೊಂಡಳು. ಆದಾಗಲೇ ಒಳ್ಳೆಯ ವಿದ್ಯಾಭ್ಯಾಸ ದೊರೆತಿದ್ದು, ಅಷ್ಟೇ ಆಸ್ಥೆಯಿಂದ ಕಲಿತಿದ್ದ ಎಮಿಲಿ ಈಗ ರೂಪು ಮತ್ತು ಬುದ್ಧಿವಂತಿಕೆಯ ಗಣಿಯಾಗಿದ್ದಳು. ಎಮಿಲಿ ಗಟ್ಟಿಗಿತ್ತಿ ಹೆಣ್ಣು, ತನ್ನ ಬದುಕಿನ ಪೂರ್ಣ ನಿಯಂತ್ರಣವನ್ನು ತನ್ನ ಕೈಯಲ್ಲಿ ಇಟ್ಟುಕೊಂಡಾಕೆ.

ಎಮಿಲಿ ಹತ್ತೊಂಬತ್ತು ವರ್ಷದವಳಿದ್ದಾಗ ತನಗೆಂಥಾ ಗಂಡ ಬೇಕೆಂದು ತಾನೇ ನಿರ್ಧರಿಸಿದಳು. ಆತ ತನಗಿಂತ ಒಂದಿಷ್ಟು ದೊಡ್ಡವನಿದ್ದರೆ ತನ್ನ ಜೀವನದಲ್ಲಿ ಅನಾವಶ್ಯಕವಾಗಿ ಅಡ್ಡಗಾಲು ಹಾಕಲಾರ ಅನಿಸಿತು. ಎಮಿಲಿ ತನಗಿಂತ ಹತ್ತು ವರ್ಷ ಹಿರಿಯವನಾದ ಮಾರ್ಕ್ವಿ ಫ್ಲಾರೆಂಟ್-ಕ್ಲಾದ್ ದು ಶಾಟೆಲೆಯನ್ನು ವಿವಾಹವಾದಳು. ಆತ ಭೂಪಡೆಯಲ್ಲಿ ಅಧಿಕಾರಿಯಾಗಿದ್ದ. ವಿವಾಹದ ಮೊದಲ ವರ್ಷಗಳಲ್ಲೆ ಒಬ್ಬ ಮಗ ಮತ್ತು ಮಗಳು ಹುಟ್ಟಿದರು. ಸಾಮಾಜಿಕ ಪ್ರತಿಷ್ಠೆ, ಗಣ್ಯರ ಸಹವಾಸ, ಅಧಿಕಾರದಲ್ಲಿದ್ದ ಪುರುಷರು, ಮೋಜಿನ ಜೂಜು ಎಲ್ಲವೂ ಎಮಿಲಿಗೆ ಪ್ರಿಯವಾಗಿದ್ದವು. ಆದರೆ ಇವೆಲ್ಲದರ ನಡುವೆಯೂ ಆಕೆಗೆ ಗಣಿತ ಪ್ರಿಯವಿತ್ತು. ತನ್ನ ಗಣಿತದ ಅಧ್ಯಯನವನ್ನು ಉಪೇಕ್ಷಿಸಲಿಲ್ಲ. ಎಮಿಲಿ ಅನೇಕ ಪ್ರಮುಖ ಗಣಿತಜ್ಞರನ್ನು ಪ್ರಾಧ್ಯಪಕರಾಗಿ ಕರೆಸಿಕೊಳ್ಳುವಂಥಾ ಆರ್ಥಿಕ ಸ್ಥಿತಿಯಲ್ಲಿದ್ದು, ಸ್ವಲ್ಪ ಸಮಯದಲ್ಲಿ ಆಕೆಯೇ ಉತ್ತಮ ಗಣಿತಜ್ಞಳಾದಳು.

ಎಮಿಲಿ ಎಂದೂ ಸಂಪ್ರದಾಯಗಳಿಗೆ ತಲೆಬಾಗಲಿಲ್ಲ. ಒಮ್ಮೆ ವಿಜ್ಞಾನಿಗಳು, ಗಣಿತಜ್ಞರು ಪರಸ್ಪರ ಸಂವಾದ ಚರ್ಚೆಗೆಂದು ಸೇರುತ್ತಿದ್ದ, ಗಂಡಸರಿಗಷ್ಟೆ ಮೀಸಲಿದ್ದ ಕೆಫೆಗೆ ಎಮಿಲಿ ನುಗ್ಗಿದಳು. ಮುಲಾಜಿಲ್ಲದೆ 'ಮಹಿಳೆಯರಿಗೆ ಪ್ರವೇಶವಿಲ್ಲ'ವೆಂದು ಹೇಳಿ ಅವಳನ್ನು ಅಲ್ಲಿಂದ ಹೊರಹಾಕಿದರು. ಎಮಿಲಿ ಸ್ವಲ್ಪವೂ ಹಿಂಜರಿಯದೆ, ಮರುದಿನ ಗಂಡು ಉಡುಪಲ್ಲಿ ಮತ್ತೆ ಹಿಂತಿರುಗಿದಳು, ಪ್ರವೇಶ ಪಡೆದಳು! ಆಕೆ ವಿವಾಹದ ನಂತರ ವಿವಾಹೇತರ ಸಂಬಂಧದಲ್ಲಿ ತೊಡಗಿದ್ದುಂಟು. ಆ ಕಾಲಕ್ಕೆ ಪ್ರತಿಷ್ಠಿತ ಸಮಾಜಗಳಲ್ಲಿ ಇದೇನೂ ದೊಡ್ಡ ವಿಷಯವಾಗಿರಲಿಲ್ಲ. ಎಮಿಲಿ ಇಪ್ಪತ್ತೇಳರ ವಯಸ್ಸಿನಲ್ಲಿ, ಕವಿ, ತತ್ತ್ವಜ್ಞಾನಿ, ಚರಿತ್ರಜ್ಞ ವಾಲ್ಟೈರನೊಡನೆ ಆಕೆಯ ಸ್ನೇಹ-ಸಂಬಂಧ ಆರಂಭವಾಯಿತು.

ವಾಲ್ಟೈರ್ ಅತಿ ಸೂಕ್ಷ್ಮ ದೇಹಸ್ಥಿತಿಯ ಮನುಷ್ಯ. ಸದಾ ಹೊಟ್ಟೆಯ ತೊಂದರೆಯಿಂದ ನರಳಿದ ವಾಲ್ಟೈರ್, ಸಾಕಷ್ಟು

ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ. ಎಮಿಲಿ ಇದಕ್ಕೆ ವಿರುದ್ಧವಾಗಿ ಗಟ್ಟಿ ದೇಹದ ಆರೋಗ್ಯವಂತೆ. ವಿಪರೀತದ ಶಕ್ತಿ, ಉತ್ಸಾಹ. ಆಕೆಗೆ ಎರಡು ಅಥವಾ ನಾಲ್ಕು ಗಂಟೆಗಳ ನಿದ್ದೆ ಸಾಕಾಗಿತ್ತು. ಕೆಲವೊಮ್ಮೆ ವಿಶ್ರಾಂತಿ ಇಲ್ಲದೆಯೂ ಲವಲವಿಕೆಯಿಂದ ದುಡಿದವಳು. ಎಮಿಲಿ ಮತ್ತು ವಾಲ್ಟೈರ್ ಜೊತೆಯಾಗಿ ಕೆಲಸ ಮಾಡಿದರು, ಹಲವು ಬಾರಿ ಇಡೀ ರಾತ್ರಿ ನಿದ್ದೆಗಟ್ಟು ದುಡಿದರು. ನಗರದ ಗದ್ದಲ ಗಲಾಟೆಗಳಿಂದ ತಪ್ಪಿಸಿಕೊಂಡು ಸೈರೀ ಎಂಬ ಹಳ್ಳಿಗಾಡಿನ ಎಸ್ಟೇಟಿನಲ್ಲಿ ಇವರಿಬ್ಬರು ನೆಲೆಸಿದರು. ಸುಮಾರು ಹದಿನಾರು ವರ್ಷಗಳ ಕಾಲ ಎಮಿಲಿ ಸಾವಿನವರೆಗೆ ಇವರು ಜೊತೆಯಾಗಿ ದುಡಿದರು. ಎಮಿಲಿಯ ಪತಿ ತನ್ನ ಸಾಹಸಮಯ ಕೆಲಸಕ್ಕೆ ಅಂಟಿ, ಮನೆಯಿಂದ ಬಹುತೇಕ ಹೊರಗೇ ಉಳಿಯುತ್ತಿದ್ದ. ಆತನಿಗೆ ಪತ್ನಿಯ ಈ ಸಂಬಂಧದ ಬಗ್ಗೆ ತಿಳಿದಿದ್ದರೂ, ಅದನ್ನೇನೂ ಹೆಚ್ಚು ಹಚ್ಚಿಕೊಳ್ಳಲಿಲ್ಲ. ತನಗೆ ಅನುಕೂಲವಾದಾಗೆಲ್ಲ ತಾನೇ ಸ್ವತಃ ಸೈರೀಗೆ ಬಂದು ಒಂದಷ್ಟು ದಿನವಿದ್ದು ಹೋಗುತ್ತಿದ್ದ. ಆತನಿಗೂ ವಾಲ್ಟೈರ್‌ಗೂ ಒಳ್ಳೆಯ ಸ್ನೇಹವಿತ್ತು.

ವಾಲ್ಟೈರ್ ಯೋಚನೆ-ಚಿಂತನೆಗಳ ಮೇಲೆ ಎಮಿಲಿಯ ದಟ್ಟ ಪ್ರಭಾವಿತ್ತು. ಎಡಬಿಡದೆ ದುಡಿವ ಅವರಿಬ್ಬರಿಗೂ ಈ ಸಂಬಂಧ ತುಂಬಾ ಅಗತ್ಯದ್ದಾಗಿತ್ತು. ಎಮಿಲಿ ವಿದ್ವಾಂಸಳಾಗಿ ಹೆಸರು ಪಡೆದಳು. 1747ರ ಹೊತ್ತಿಗೆ ಎಳೆಯ ವಿಜ್ಞಾನಿಗಳು, ಗಣಿತಜ್ಞರು ಎಮಿಲಿಯೊಡನೆ ಅಧ್ಯಯನ ಮಾಡಲು, ಆಕೆಯನ್ನು ಹುಡುಕಿ ಬರತೊಡಗಿದರು. ಆಗಿನ ಕಾಲಕ್ಕೆ ಹೆಂಗಸೊಬ್ಬಳನ್ನು ಅಧ್ಯಾಪಕಿಯಾಗಿ ಹುಡುಕಿ ಬಂದದ್ದು ಬಹು ಅಪರೂಪದ ಘಟನೆಯಾಗಿತ್ತು. ಇದು ಎಮಿಲಿಯ ದೊಡ್ಡ ಸಾಧನೆಯಾಗಿತ್ತು. ವಾಲ್ಟೈರ್ ಎಮಿಲಿಯ ಗಣಿತ-ವಿಜ್ಞಾನದ ಜ್ಞಾನದಿಂದ ಪ್ರಭಾವಿತನಾಗಿ ಆಕೆಗೆ 'ಉದಾನೀ' ಎಂದು ಹೆಸರಿಟ್ಟಿದ್ದ.

ಎಮಿಲಿ ಮತ್ತು ವಾಲ್ಟೈರ್ ಸೈರೀಯಲ್ಲಿ ಒಂದು ಪ್ರಯೋಗಶಾಲೆಯನ್ನೇ ಸ್ಥಾಪಿಸಿದರು. ಅವರಿಬ್ಬರೂ ಬೆಂಕಿಯ ಗುಣ-ಪ್ರಕೃತಿಯ ಬಗ್ಗೆ ಅಧ್ಯಯನ ಮಾಡಿ, 1739ರಲ್ಲಿ ಫ್ರೆಂಚ್ ವಿಜ್ಞಾನ ಅಕಾಡೆಮಿಯ ಒಂದು ಸ್ಪರ್ಧೆಗೆ ತಮ್ಮ ಅಧ್ಯಯನವನ್ನು ಕಳುಹಿಸಿದರು. ಅವರಿಗೆ ಬಹುಮಾನ ಬಾರದಿದ್ದರೂ, ಅವರ ಪ್ರಬಂಧವನ್ನು ಅಕಾಡೆಮಿ ಮುದ್ರಿಸಿ, ಮೆಚ್ಚುಗೆ ವ್ಯಕ್ತ ಪಡಿಸಿತು. ಜೊತೆಯಲ್ಲಿ ಬಾಳಿ ದುಡಿದರೂ ಎಮಿಲಿ ಮತ್ತು ವಾಲ್ಟೈರ್ ಪರಸ್ಪರಿಗೆ ನಿಷ್ಠರಾಗೇನೂ ಇರಲಿಲ್ಲ.

1740ರಲ್ಲಿ ಎಮಿಲಿ ಬರೆದ 'Les Institutions de Physique' ಪುಸ್ತಕ ಭೌತಶಾಸ್ತ್ರದ ಮೂಲ ಪಠ್ಯ ಪುಸ್ತಕವಾಯಿತು. ಇದರಲ್ಲಿ ಎಮಿಲಿ ನ್ಯೂಟನ್, ಲಾಯಬ್ನಿಜ್, ಡೇಕಾರ್ಟ್ ಅವರ ವಿಚಾರಗಳನ್ನು ತೀಕ್ಷ್ಣವಾಗಿ ಮಂಡಿಸಿದ್ದಳು. ಇದೇ ವರ್ಷದಲ್ಲಿ ಎಮಿಲಿ ಹಳೆಯ ಹಾಗೂ ಹೊಸ ಒಡಂಬಡಿಕೆಯನ್ನು ಕುರಿತಂತೆ 'Reflections sur le Bonheur' ಕೂಡಾ ಪ್ರಕಟಿಸಿದಳು. ಎಮಿಲಿ ತನ್ನ ಸಾಯುವ ದಿನದವರೆಗೂ ಗಣಿತವನ್ನು ಗಂಭೀರವಾಗಿ ತೆಗೆದುಕೊಂಡಳು. ಎಮಿಲಿ ಲ್ಯಾಟೀನ್ ಭಾಷೆಯಿಂದ ಫ್ರೆಂಚ್ ಭಾಷೆಗೆ ನ್ಯೂಟನ್ನನ 'ಪ್ರಿನ್ಸೀಪಿಯಾ'ವನ್ನು ತನ್ನ ಟಿಪ್ಪಣಿಗಳೊಡನೆ ಅನುವಾದಿಸಿದ್ದಳು. ಆಕೆ 'ಪ್ರಿನ್ಸಿಪೀಯಾ'ದ ಅನುವಾದ ಪುಸ್ತಕಕ್ಕೆ ಆಕೆ ನೀಡಿದ ಪೀಠಿಕೆ, ವಿಶ್ಲೇಷಣೆ, ಟಿಪ್ಪಣಿಗಳು ಇಂದಿಗೂ ಗುರುತಿಸಲ್ಪಡುತ್ತವೆ. ಆಕೆಯ ಅನುವಾದ ಹಾಗೂ ವಿಶ್ಲೇಷಣೆ 'ಪ್ರಿನ್ಸಿಪಿಯಾ'ದ ವಿಚಾರಗಳು ಇಡೀ ಯೂರೋಪು ಖಂಡದಲ್ಲಿ ಬಲು ಬೇಗ ಹರಡುವಲ್ಲಿ, ಬಹು ಮುಖ್ಯ ಪಾತ್ರ ವಹಿಸಿದವು. 1959ರಲ್ಲಿ ಆಕೆಯ ಸಾವಿನ ಹತ್ತು ವರ್ಷಗಳ ನಂತರ ಪ್ರಕಟವಾದ ಈ ಪುಸ್ತಕ ಇಂದಿಗೂ 'ಪ್ರಿನ್ಸೀಪಿಯಾ'ದ ಫ್ರೆಂಚ್ ಭಾಷೆಯ ಏಕೈಕ ಅನುವಾದವಾಗಿದೆ. ನ್ಯೂಟನ್ನನ ಹೊಸ ಸಿದ್ಧಾಂತಗಳನ್ನು ವಿಶ್ಲೇಷಿಸಲು ಹೊಸ ಬಗೆಯ ಗಣಿತದ ಅಗತ್ಯವಿತ್ತು. ನ್ಯೂಟನ್ ಮತ್ತು ಲಾಯಬ್ನಿಜ್ ಕಂಡು ಹಿಡಿದ ಈ ಹೊಸ ಗಣಿತವಾದ 'ಕಲನ ಗಣಿತ'ವನ್ನು ಎಮಿಲಿ ಫ್ರಾನ್ಸಿಗೆ ಪರಿಚಯಿಸಿದ್ದಳು.

1749, ಎಮಿಲಿ ನಾಲ್ಕನೇ ಬಾರಿ ಗರ್ಭಿಣಿಯಾದಳು. ಮಗುವಿನ ತಂದೆ ಮಾರ್ಕಿ ದ ಸೇಂಟ್ ಲ್ಯಾಂಬರ್ಟ್. ಮಗು ಹುಟ್ಟುವ ಕ್ಷಣದವರೆಗೂ ಆಕೆ ಗಣಿತದಲ್ಲಿ ಮುಳುಗಿದ್ದಳು. ಹುಟ್ಟಿದ ಮಗುವನ್ನು ಅರೆಕ್ಷಣ 'ಜಾಮಿತಿ'ಯ ಪುಸ್ತಕದ ಮೇಲೆ ಮಲಗಿಸಿ, ತಾಯಿಯನ್ನು ನೇರವಾಗಿ ಹಾಸಿಗೆಗೆ ರವಾನಿಸಿದ್ದರು. ಆದರೆ ಎಮಿಲಿ ಬಾಣಂತಿ ಜ್ವರದಲ್ಲಿ ನರಳಿ ಕೆಲವೇ ದಿನಗಳಲ್ಲಿ ತೀರಿಕೊಂಡಳು. ಆಕೆ ಸಾವು ಆಕೆಯ ಕುಟುಂಬದೊಡನೆ ವಾಲ್ಟೈರ್‌ನನ್ನೂ ದುಃಖದಲ್ಲಿ ಮುಳುಗಿಸಿತ್ತು. ನಂತರದ ವರ್ಷಗಳಲ್ಲಿ ಇಡೀ ಕುಟುಂಬ ನಶಿಸಿ ಹೋಯಿತು. ಆಕೆಯ ಮೊದಲ ಮಗ ಗಿಲಟಿನಗೆ ಬಲಿಯಾದ. ಮೊಮ್ಮಗ ಫ್ರೆಂಚ್ ಕ್ರಾಂತಿಯಲ್ಲಿ ತೀರಿಕೊಂಡ. ಆದರೆ ತನ್ನ 'ಕಾಲ'ದ ಮಿತಿಯಲ್ಲಿಯೂ, ಎಮಿಲಿ ಗಣಿತ ಮತ್ತು ವಿಜ್ಞಾನಕ್ಕೆ ನೀಡಿದ ಕೊಡುಗೆ ಸ್ಮರಣೀಯವಾದದ್ದು. ■

# ದೀಪಕ್ಕನಿಗೊಂದು ಬಹಿರಂಗ ಪತ್ರ

- ಶಾಂತಾ ನಾಗರಾಜ್

ಮಹತ್ವದ ದೀಪಕ್ಕಾ

ಏನವ್ವಾ ನಿನ್ನ ಈ ಎಲ್ಲ ಉಪದ್ವಾಪ ? ಮಹಾಮಹಿಮರೂ, ಧರ್ಮಶ್ರೇಷ್ಠರೂ, ಪುಣ್ಯವಂತರೂ, ಗುರು ಪರಂಪರೆಯೂ ನಡೆದು ಬಂದಂಥ ಈ ಪುಣ್ಯ ಭೂಮಿಯಲ್ಲಿ ಯಃಕಶ್ಚಿತ್ ವಿಧವೆಯರ ಕುರಿತು ಚಿತ್ರಮಾಡುವ ದುರ್ಬುದ್ಧಿ ನಿನಗ್ಯಾಕೆ ಬಂತು ಹೇಳು ? ಎಂಥ ದೇಶ ನಮ್ಮದು ? ಎಂಥ ವೈಭವದ ಪರಂಪರೆ ?? ಎಂತೆಂಥಾ ಸತ್ಸಂಪ್ರದಾಯಗಳೂ ??? ಅಲ್ಲ ? ''ನನಗೆ ಹಿಂದೂ ಧರ್ಮ ಬಿಟ್ಟರೆ ಬೇರೇನೂ ಗೊತ್ತಿಲ್ಲ'' ಎನ್ನುತ್ತೀ. ನಮ್ಮ ಹಿಂದೂ ವೀರಾಗ್ರಣಿಗಳ ಉದಾರ ನೀತಿಯೇ ನಿನಗೆ ತಿಳಿದಿಲ್ಲವಲ್ಲ ?

ನೋಡು ನಿನ್ನದೇ ಬಾಲಿವುಡ್ಡಿನಲ್ಲಿ ಸ್ವಲ್ಪ ಕಣ್ತೆರೆದು ನೋಡು. ಭೋಪ್ರಾ ಸಾಹೇಬರೂ, ಫಾಯ್ ಬಂಧುಗಳೂ, ಮಾಧುರಿ, ಕರಿಷ್ಮಾ, ಊರ್ಮಿಳಾದಿಗಳನ್ನು ಎಂಥಾ ಸತ್ಸಂಪ್ರದಾಯದಡಿಯಲ್ಲಿ ಚೋಲೀಕೆ ಪೀಛೆ, ತ್ತನಹಾತನಹಾ, ಸೆಕ್ಸಿ ಸೆಕ್ಸೀ ಎಂದೆಲ್ಲಾ ಕುಣಿಸಿದಾಗ ಇದೇ ವಾರಣಾಸಿಯ ಹಿಂದೂ ಹಿತ ಚಿಂತಕರು ಬೆರಗುಗಣ್ಣು ಬಿಟ್ಟ ಬಾಯಿಗಳಿಂದ ವ್ಹಾ! ವ್ಹಾ!! ಎಂದದ್ದು ಅದೇ ಮುಂಬಯಿಯಲ್ಲಿದ್ದ ನಿನಗೂ ಕೇಳಿಸಿರಬೇಕಲ್ಲ ? ಎಂಥ ಔದಾರ್ಯ ?!! ಕಂಡೆಯಾ ?

ಇಂಥ ಉದಾಹರಣೆಗಳು ಕೇವಲ ಸಿನಿಮಾಕ್ಕೆ ಮಾತ್ರ ಅಲ್ಲ ನಮ್ಮ ನಿತ್ಯ ಬದುಕಿನಲ್ಲೂ ಸಾವಿರಗಟ್ಟಲೆ ಇವೆ ಗೊತ್ತಾ ? ರಾಜಾಸ್ಥಾನದ ಭತೇರಿ ಗ್ರಾಮದ . ಭಾವ್ರಿದೇವಿ ಎನ್ನುವ ಬಡಪಾಯಿ ಸಮಾಜ ಸೇವಕಿ, ಊರ ಶ್ರೀಮಂತರ ಮನೆಯಲ್ಲಿ ಪುಟ್ಟಮಕ್ಕಳ ಬಾಲ್ಯವಿವಾಹ ತಪ್ಪಿಸಿದ್ದಕ್ಕೆ ಆಕೆಯ ಮೇಲೆ ಊರ ಮುಖಂಡರು ಅತ್ಯಾಚಾರ ನಡೆಸಿ, ಆಕೆ ಕೋರ್ಟಿಗೆ ನ್ಯಾಯ ಕೇಳಲು ಹೋದಾಗ ಸಿಕ್ಕ ತೀರ್ಪು ಗೊತ್ತಿದೆಯಾ ನಿನಗೆ ? ಊರಿನ ಉತ್ತಮ ಜನಾಂಗದವರು ಹೀಗೆಲ್ಲಾ ತಪ್ಪೇ ಮಾಡುವುದಿಲ್ಲ ಎಂದರಂತೆ ನ್ಯಾಯಾಧಿಪತಿಗಳು !! ಎಂಥ ಪುಣ್ಯ ಭೂಮಿ ನಮ್ಮದು ? ಏನು ಕತೆ ? ಇದನ್ನೆಲ್ಲಾ ಸ್ವಲ್ಪ ತಿಳಿದುಕೋ ತಾಯಿ.

ಇನ್ನು ರೂಪಾ ಕನ್ವರಳ ಕಥೆಯಂತೂ ನಿನಗೂ ಗೊತ್ತಿರಬಹುದು. ಅವಳೇನು ಅವಳ ಹಾಗೆ ಸತಿ ಹೋಗುವ ಚಟ ಇತ್ತೀಚೆಗೆ ಮತ್ತೂ ಹೆಚ್ಚುತ್ತಿದೆ. ನಮ್ಮ ಧರ್ಮಾಧಿಕಾರಿಗಳೂ ಇದೇ ಸರಿ ಎಂದು ತೀರ್ಪುಕೊಟ್ಟಿದ್ದಾರೆ ಗೊತ್ತ ? ಒಂದು ಕೆಲಸ ಮಾಡು ಹೇಗೂ ಚಿತ್ರೀಕರಣವಿಲ್ಲ ಈಗ. ಬಿಡುವಾಗಿದ್ದೀಯೆ. ಆ ನಿನ್ನ ಜೊತೆಗಾರ್ತಿಯರನ್ನು ಕರೆದುಕೊಂಡು ಭಾರತದ ತುಂಬೆಲ್ಲ ಇರುವ ಇಂಥ ಸತಿ ದೇವಾಲಯದ ಯಾತ್ರೆಯನ್ನಾದರೂ ಮಾಡು, ಪುಣ್ಯ ಬಂದೀತು.

ಅಲ್ಲ ಎಲ್ಲಾ ಬಿಟ್ಟು ನಿನಗೆ ಕಾಶಿಯಲ್ಲಿರುವ ವಿಧವೆಯರೇ ಯಾಕೆ ಕಣ್ಣಿಗೆ ಬಿದ್ದರೋ ಗೊತ್ತಿಲ್ಲಮ್ಮ. ಅದು ಬಿಟ್ಟು ಇಡೀ ಭಾರತದಲ್ಲಿರುವ ಜಮೀನುದಾರರು ಹಾಗೂ ಇತರ ಶ್ರೀಮಂತರು, ಅನೇಕ ಪ್ರೊಫೆಸರುಗಳೂ ಎರಡು ಮೂರು ಮದುವೆಗಳನ್ನು ಮಾಡಿಕೊಂಡು ವೈಭವದಿಂದ ಜೀವನ ನಡೆಸುತ್ತಿರುವುದನ್ನು ಮತ್ತೂ ವೈಭವೀಕರಿಸಿ ಚಿತ್ರ ತೆಗೆದಿದ್ದರೆ ಒಂದಿಷ್ಟು ಬಾಕ್ಸಾಫೀಸಿನ ಖಜಾನೆಯಾದರೂ ತೆರೆದು ಕೊಳ್ಳುತ್ತಿತ್ತು. ಆದರೆ ನೀನು, ಬೆಂಕಿ, ಭೂಮಿ, ನೀರು ಅಂತ ಯಾಕೆ ಒದ್ದಾಡುತ್ತೀಯೋ ಆ ಕಾಶಿ ವಿಶ್ವೇಶ್ವರನಿಗೂ ಗೊತ್ತಿಲ್ಲವೇನೋ !

ಒಂದು ಕೆಲಸ ಮಾಡು, ಈ ನಿನ್ನ ಚಿತ್ರಕತೆ, ನಿನ್ನ ತಂಡ ಎಲ್ಲಾ ತೆಗೆದುಕೊಂಡು ಯಾವುದಾದರೂ ಪಾಶ್ಚಾತ್ಯ ದೇಶಕ್ಕೆ ಹೋಗಿ ಬಿಡು. ಇದೇ ಪಾತ್ರಗಳಿಗೆ ಸ್ವಲ್ಪ ಕಾಸ್ಟ್ಯೂಂ ಬದಲಿಸಿ ಒಂದೆರಡು ನೃತ್ಯ ಮತ್ತು ಫೈಟಿಂಗ್ ಸೀನ್‌ಗಳನ್ನು ಸೇರಿಸಿ ಭರ್ಜರಿ ಸಿನಿಮಾ ಮಾಡಿಕೊಂಡು ಬಾ. ಈ ನಮ್ಮ ಎಲ್ಲ ಧರ್ಮ ರಕ್ಷಕರೂ ಎರಡೆರಡು ಸಾರಿ ನೋಡದಿದ್ದರೆ ಕೇಳು !! ನಮಗೆಲ್ಲಾ ಕಣ್ಣಿಗೆ ಒಗ್ಗಿರುವುದು ಅಂಥದೇ ಚಿತ್ರಗಳಮ್ಮ. ಸುಮ್ಮನೆ ಕಗ್ಗಂಟು ಬಿಡಿಸುವ ಕೆಲಸ ಕೊಟ್ಟು ನಮ್ಮನ್ಯಾಕೆ ಗೋಳು ಹುಯ್ದುಕೊಳ್ಳುತ್ತೀ ? ಪ್ರವಾಹದ ವಿರುದ್ಧ ಈಜಿದರೇ ಸಹಿಸುವುದು ಕಷ್ಟ. ನೀನೋ ಸುಳಿಯ ವಿರುದ್ಧ ಈಜುತ್ತೇನೆಂದು ಹಠ ಮಾಡುತ್ತೀ. ಇವೆಲ್ಲ ಅಸಾಧ್ಯ ಬಿಡು.

ಒಂದು ಗುಟ್ಟಿನ ವಿಚಾರ ಹೇಳುತ್ತೇನೆ ಕೇಳು. ಇಡೀ ವಿಶ್ವ 21ನೇ ಶತಮಾನಕ್ಕೆ ಕಾಲಿಟ್ಟಿರಬಹುದು. ಆದರೆ ನಾವೆಲ್ಲಾ ಧರ್ಮರಕ್ಷಕರು. ಮನೆಯಲ್ಲಿ ವೇಗವಾಗಿ ಗಡಿಯಾರವನ್ನು ಹಿಂದೆ ಹಿಂದೆ ತಿರುಗಿಸಿ ಕೊಳ್ಳುತ್ತಿದ್ದೇವೆ. ಆದಷ್ಟು ಬೇಗ ಹತ್ತನೇ ಶತಮಾನಕ್ಕೆ ಹೋಗಿ ಬೆಚ್ಚಗೆ ಕೂತುಬಿಡುವ ಇರಾದೆ ನಮ್ಮದು. ಆಗ ಇನ್ನೂ ಭರ್ಜರಿಯಾಗಿ ಜಾತಿ, ಮತ ಅಂತ ಕುಣಿದಾಡಬಹುದು ಗೊತ್ತಾ ? ಅದೆಲ್ಲ ಮಜಗಳು ನಿನ್ನಂಥವರಿಗೆ ಅರ್ಥವಾಗುವುದಿಲ್ಲ ಬಿಡು.

ಇಷ್ಟೆಲ್ಲಾ ಆದ ಮೇಲೂ ಆ ಕಾಶಿ ವಿಧವೆಯರಿಗೆ ಇನ್ನೂ ಏನಾದರೂ ಸಹಾಯ ಮಾಡುವ ಮನಸ್ಸಿದ್ದರೆ ಒಂದು ಕೆಲಸ

ಮಾಡು. ಗುಟ್ಟಾಗಿ ಆ ಧರ್ಮ, ಸಂಸ್ಕೃತಿ, ಹಿತ ಚಿಂತಕರು ಎಂದು ಕುಣಿದಾಡುತ್ತಿರುವ ಮಂದಿಯ ಕೈ ಬಿಸಿ ಮಾಡು. ಅವರು ಉದಾರವಾಗಿ ಉಚಿತವಾಗಿ ಗಟ್ಟಿಮುಟ್ಟಾದ ಕೆಲವು ಮಹಿಳೆಯರನ್ನು ನಿನಗೆ ಬಿಟ್ಟುಕೊಡುತ್ತಾರೆ. ಅವರನ್ನು ಮುಂಬಯಿಗೆ ಕರೆತಂದು ಒಂದಿಷ್ಟು ಆಆಇಈ ಕಲಿಸಿ, ಯಾವುದಾದರೂ ಕೆಲಸಕ್ಕೆ ಸೇರಿಸು. ಬಡಪಾಯಿಗಳ ತುತ್ತಿನ ಚೀಲ ತುಂಬುವ ಸಮಸ್ಯೆಯಾದರೂ ಪರಿಹಾರವಾಗುತ್ತದೆ. ಅದಾಗದಿದ್ದರೆ ನಿನ್ನಷ್ಟಕ್ಕೆ ನೀನು ಸುಮ್ಮನಿರು. ನಮ್ಮ ಅಡಿಗರು ನಿಮ್ಮಂತಹವರನ್ನು ಕಂಡೇ ಒಂದು ಪದ್ಯ ಬರೆದಿದ್ದಾರೆ ಗೊತ್ತಾ? ಸಾಧ್ಯವಾದರೆ ಗಾಯತ್ರಿ ಮಂತ್ರದಂತೆ ದಿನಕ್ಕೊಮ್ಮೆ ಇದನ್ನು ಪಠಿಸು.

ಇಲ್ಲಿ ಮಿಡಿದಿತ್ತು ಕೋದಂಡ
ಮೊಳಗಿತ್ತು ಪಾಂಚಜನ್ಯ
'ಇತ್ತು'ಗಳ ಧ್ವಜವನೆತ್ತಿ ಹಿಡಿಯೋ ಮಗು
'ಇದೆ'ಯ ಹೃದಯ ದ್ರಾವ ಬೇಡ ನಿನಗೆ !

---

ಪ್ರೀತಿಯ ಅಚಲಾ,

ನಮ್ಮ ಮನೆಯ ಮುಂದೆ ನಾಲ್ಕು ವರ್ಷದ ಹುಡುಗನೊಬ್ಬ ಬೀಡಿ ಸೇದುತ್ತಿದ್ದ. ನೋಡಿ ನನಗೆ ಗಾಬರಿ, ಅನುಕಂಪ ಎರಡೂ ಉಂಟಾದವು. ''ಅಲ್ಲ ಮರಿ ಇಷ್ಟು ಚಿಕ್ಕ ಹುಡುಗ ಯಾಕಪ್ಪಾ ಬೀಡಿ ಸೇದುತ್ತಿದ್ದೀ'' ಎಂದೆ. ಆ ಹುಡುಗ ನನ್ನ ಪ್ರಶ್ನೆಯಿಂದ ವಿಚಲಿತನಾಗಲಿಲ್ಲ. ತನ್ನ ಬೀಡಿಯನ್ನು ಮುಚ್ಚಿಟ್ಟು ಕೊಳ್ಳಲೂ ಇಲ್ಲ. ನನ್ನನ್ನೇ ದುರುಗುಟ್ಟಿಕೊಂಡು ನೋಡುತ್ತಾ ''ಯಾಕ್ರೀ ನಾನು ಗಂಡಸಲ್ಲವೇನ್ರೀ?'' ಎಂದ. ಈ ಉತ್ತರದಿಂದ ನಾನು ಸ್ಥಂಭೀಭೂತಳಾಗಿ ಹೋದೆ.

ಮತ್ತೊಂದು ಘಟನೆ ಒಂದು ಸಂಸ್ಥೆಯಲ್ಲಿ ನಾನು ಕೆಲಸ ಮಾಡುತ್ತಿದ್ದೆ. ಆ ಸಂಸ್ಥೆಯ ಮುಖ್ಯ ಅಧಿಕಾರಿ ಒಬ್ಬ ಅತ್ಯಂತ ಸಮರ್ಥ ಮಹಿಳೆಯಾಗಿದ್ದರು. ಅದೇ ಸಂಸ್ಥೆಯಲ್ಲಿ ಒಬ್ಬ ಅಟೆಂಡರ್ ಇದ್ದ. ಈತ ತನ್ನನ್ನು ತಾನು 'ಪುರುಷಶ್ರೇಷ್ಠ' ಎಂದು ಭಾವಿಸಿದ್ದ. ಅದೇ ಸಂಸ್ಥೆಯಲ್ಲಿ ಮತ್ತೊಬ್ಬ ಮಹಿಳೆ ಅಟೆಂಡರ್ ಇದ್ದಳು. ಈ ಶ್ರೇಷ್ಠ ಆಕೆಯ ಮೇಲೆ ದರ್ಪ ಸಾಧಿಸಿ, ನೆಲಗುಡಿಸುವ, ಸಾರಿಸುವ, ಅತಿಥಿಗಳು ಕುಡಿದಿಟ್ಟ ಕಾಫಿ ಲೋಟಗಳನ್ನು ತೊಳೆಯುವ ಕೆಲಸಗಳನ್ನು ಅವಳಿಂದಲೇ ಮಾಡಿಸಿ ತಾನು ಕೇವಲ ಹೊರಗೆ ಓಡಾಡುವ ಕೆಲಸ ಮಾತ್ರ ಮಾಡುತ್ತಾ, ಕೆಲಸದ ಹೊರೆಯನ್ನು ತನ್ನ ರೀತಿಯಲ್ಲಿ ವರ್ಗೀಕರಿಸಿಕೊಂಡುಬಿಟ್ಟಿದ್ದ. ಒಮ್ಮೆ ಈ ಮಹಿಳಾ ಅಟೆಂಡರ್ ಎರಡು ಮೂರು ದಿನ ರಜೆ ಹಾಕಿದಳು. ನೆಲದಲ್ಲಿ ಕಸ ತುಂಬಿತು. ಕಾಫಿ ಲೋಟಗಳು ತೊಳೆಯದೇ ಶೇಖರಣೆಯಾದವು. ನಾವೆಲ್ಲ ಈ ಕೆಲಸ ಮಾಡಲು ಈ ಪುರಷ ಶ್ರೇಷ್ಠನಿಗೆ ಹೇಳಿ ಹೇಳಿ ಸಾಕಾಯಿತು. ಈತ ಕಿವಿ ಮೇಲೇ ಹಾಕಿಕೊಳ್ಳಲಿಲ್ಲ. ಸರಿ ದೂರು ಮುಖ್ಯ ಅಧಿಕಾರಿಣಿಯವರೆಗೆ ಹೋಯಿತು. ಆಕೆ ಕರೆದು ಛೀಮಾರಿ ಹಾಕಿದರು. ಆತ ಧುಮುಗುಟ್ಟುತ್ತಾ ಹೊರಬಂದು ಹೇಳಿದ್ದೇನು ಗೊತ್ತೇನು ''ಎಂಗಸರ್‌ಗೆ ಈಥರಾ ದರ್ಪ ಇರಬಾರ್ದು ? ಒಂದಿನ ತಾನೇ ಗುಡಿಸಿಕೊಂಡರೆ ಏನ್ ಕೈಬಿದ್ ಹೋಗತ್ತಾ''.

ಈ 'ಪುರುಷ ಶ್ರೇಷ್ಠತೆ' ಎನ್ನುವುದು ಒಂದು ಪಿಡುಗು ಎನ್ನುವಷ್ಟು ಈ ನಮ್ಮ ಸಮಾಜದಲ್ಲಿ ಹರಡಿ ಹೋಗಿದೆ. ಬಾಲ್ಯದಿಂದಲೇ ಹೆಣ್ಣನ್ನು ತಗ್ಗಿಬಗ್ಗಿ ನಡೆಯುವಂತೆ ಬಗ್ಗಿಸುವ ಬೆಳೆಸುವ ರೀತಿಗಳು, ಗಂಡಸರಲ್ಲಿ ಕ್ರೌರ್ಯ ಹಾಗೂ ನಾಚಿಗೆಗೆಟ್ಟ ತನಗಳನ್ನು ಬೇರೂರಿಸುತ್ತಾ ಹೋಗುತ್ತವೆ. ಪುಟ್ಟ ಗಂಡು ಹುಡುಗರು ಅತ್ತರೆ, ನಾಚಿಕೊಂಡರೆ ''ಏನೋ ಅದು ಒಳ್ಳೆ ಹುಡುಗಿಯ ಹಾಗೆ ಆಡುತ್ತೀಯ'' ಎನ್ನುವ ಮಾತುಗಳೇ ಸಾಕು, ಅವರಲ್ಲಿ ನಯ ಮತ್ತು ಸೂಕ್ಷ್ಮತನ ಕಳೆದುಕೊಂಡು ತಮ್ಮನ್ನು ತಾವು 'ಶ್ರೇಷ್ಠ' ಎಂದು ಭಾವಿಸಿಕೊಳ್ಳುವುದಕ್ಕೆ !

- ಶತಭಿಷಾ

# ಅಭಿವೃದ್ಧಿಯ ಲಿಂಗ ಸಂಬಂಧಿ ಆಯಾಮಗಳು

ಡಾ। ಟಿ. ಆರ್. ಚಂದ್ರಶೇಖರ್

ಪುರಷಶಾಹಿಯು ವಿಜೃಂಭಿಸುತ್ತಿರುವ ನಮ್ಮ ಸಮಾಜದಲ್ಲಿ ಅಭಿವೃದ್ಧಿಯು ಲಿಂಗ ಮುಖಿಯಾಗಿದ್ದರೆ ಮತ್ತು ಅದು ಏಕ ಲಿಂಗಿ ಪ್ರಕ್ರಿಯೆಯಾಗಿ ಪರಿಣಮಿಸಿದ್ದರೆ ಅದರಲ್ಲಿ ಆಶ್ಚರ್ಯಪಢಬೇಕಾದ ಸಂಗತಿ ಏನಿಲ್ಲ. ಅಭಿವೃದ್ಧಿ ಸಂಬಂಧಿ ಜ್ಞಾನ ಶಿಸ್ತುಗಳಾದ ಅರ್ಥಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರ ಮುಂತಾದವು ಲಿಂಗ ನಿರಪೇಕ್ಷ ಧೋರಣೆ ತಳೆದು ಬಿಟ್ಟಿವೆ. 'ಜೈವಿಕ ನೀತಿ'ಯಲ್ಲಿ ನಂಬಿಕೆಯಿಟ್ಟಿರುವ ಸದರಿ ಶಿಸ್ತುಗಳು ಮಹಿಳೆಯರನ್ನು ಅಬಲೆಯರೆಂದು, ಅಶಕ್ತರೆಂದು, ಅವರ ಕಾರ್ಯಕ್ಷೇತ್ರ ಕೇವಲ ಕೌಟುಂಬಿಕ ಚೌಕಟ್ಟು ಎಂದು ನಿರ್ಣಯಿಸಿಬಿಟ್ಟಿವೆ. ಮಹಿಳೆಯರ ದುಡಿಮೆಯನ್ನು ದುಡಿಮೆಯೆಂದು ಪರಿಗಣಿಸಿದರೆ ಅವರ ದುಡಿಮೆಯು ಪ್ರಕೃತಿಗೆ ಹೆಚ್ಚು ಸನಿಹವಾಗಿರುವುದರಿಂದ ಕೇವಲ ಜೈವಿಕ ಚಟುವಟಿಕೆ ಎನಿಸಿಕೊಂಡಿದೆ. ಈ ಕಾರಣದಿಂದಾಗಿ ಅಭಿವೃದ್ಧಿಯು ಮಹಿಳೆಯರ ಹಿತಾಸಕ್ತಿಗಳನ್ನು ಕಾಪಾಡುವುದಕ್ಕೆ ಪ್ರತಿಯಾಗಿ ಅದು ಅವರ ಬದುಕಿಗೆ ಮಾರಕವಾಗಿರುವ ದುರಂತ ನಮ್ಮ ಎದುರಿಗಿದೆ.

ಅಮರ್ತ್ಯಸೇನ್ ಹೇಳುವಂತೆ ಬದುಕಿನ ಎಲ್ಲ ಮುಖಗಳಲ್ಲೂ ಅವರು ಒಂದೋ ಕಾಣೆಯಾಗಿದ್ದರೆ, ಕಳೆದು ಹೋಗುತ್ತಿದ್ದಾರೆ, 'ಇಲ್ಲ'ವಾಗುತ್ತಿದ್ದಾರೆ. ಇಲ್ಲವೆ 'ದೈನೇಸಿ' ಬದುಕು ಸಾಗಿಸುತ್ತಿದ್ದಾರೆ. ಹೆಣ್ಣು ಭ್ರೂಣವಾಗಿ ತಾಯಿ ಗರ್ಭ ಸೇರಿದಾಗಿನಿಂದ ಅಂತಿಮವಾಗಿ ಭೂಮಿಯ ಗರ್ಭ ಸೇರುವವರಗೆ ತಾರತಮ್ಯ, ಪಕ್ಷಪಾತ, ಭರ್ತ್ಸನೆ ಮತ್ತು ನಿರ್ಲಕ್ಷ್ಯಕ್ಕೆ ಒಳಗಾಗುತ್ತಿದ್ದಾಳೆ. ಜನಸಂಖ್ಯೆಯಲ್ಲಿ ಮಹಿಳೆಯರ ಸಾಪೇಕ್ಷ ಪ್ರಮಾಣವು ಕಡಿಮೆಯಾಗುತ್ತಿರುವ ಸಂಗತಿಯನ್ನು ಅಮರ್ತ್ಯ ಸೇನ್ ಲಿಂಗ ಅಸಮಾನತೆಯ, ಲಿಂಗ ತಾರತಮ್ಯದ ಅಳತೆಗೋಲಾಗಿ ಬಳಸುತ್ತಾರೆ. ಕರ್ನಾಟಕದಲ್ಲಿ 1981ರಲ್ಲಿ ಲಿಂಗ ಪರಿಮಾಣ 1000:93 ಇತ್ತು. 1991ರಲ್ಲಿ ಅದು 960ಕ್ಕೆ ಇಳಿದಿದೆ. 1991ರಲ್ಲಿದ್ದ ಮಹಿಳೆಯರ ಸಂಖ್ಯೆ 220.25 ಲಕ್ಷ ಮತ್ತು ಪುರುಷರ ಸಂಖ್ಯೆ 229.52 ಲಕ್ಷ. ಒಂದು ವೇಳೆ ಲಿಂಗ ಪರಿಮಾಣವು 1991ರಲ್ಲಿ 960ಕ್ಕೆ ಪ್ರತಿಯಾಗಿ 1981ರಲ್ಲಿ ಇದ್ದ 963 ಆಗಿದ್ದರೆ, ಆಗ 1991ರಲ್ಲಿ ಮಹಿಳೆಯರ ಸಂಖ್ಯೆ 221.03 ಲಕ್ಷವಾಗುತ್ತಿತ್ತು. ಅಂದರೆ ಲಿಂಗ ಪ್ರಮಾಣದ ಕುಸಿತದಿಂದ ಕರ್ನಾಟಕದಲ್ಲಿ 1981 ರಿಂದ 1991ರ ಅವಧಿಯಲ್ಲಿ ಸುಮಾರು 78000 ಮಹಿಳೆಯರು ಕಾಣೆಯಾಗಿದ್ದಾರೆ.

## ಮರಣ ಪ್ರಮಾಣದಲ್ಲಿ ತಾರತಮ್ಯ

ಜೈವಿಕವಾಗಿ, ಪ್ರತಿಕೂಲ ಸಂದರ್ಭದಲ್ಲಿ ಬದುಕುಳಿಯುವ ಸಾಮರ್ಥ್ಯ ಪುರುಷರಿಗಿಂತ ಮಹಿಳೆಯರಿಗೆ ಅಧಿಕ ಎಂದು ಹೇಳಲಾಗಿದೆ. ಆದರೆ ಕರ್ನಾಟಕದಲ್ಲಿ 35-40 ವರ್ಷದವರೆಗೆ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಿರುವುದು ಲಿಂಗ ತಾರತಮ್ಯ, ಲಿಂಗ ಅಸಮಾನತೆಯ ಸೂಚನೆ ಎನ್ನುತ್ತಾರೆ ಅಮರ್ತ್ಯಸೇನ್. 5 ರಿಂದ 43ನೆಯ ವಯೋಮಾನದಲ್ಲಿ ಮಹಿಳೆಯರ ಮರಣ ಪ್ರಮಾಣ 1992ರಲ್ಲಿ 2.75 ಇದ್ದರೆ ಪುರುಷರ ಮರಣ ಪ್ರಮಾಣ ಇದೇ ವಯೋಮಾನದಲ್ಲಿ 2.15ರಷ್ಟಿದೆ. ಶಿಶುಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಲಿಂಗ ತಾರತಮ್ಯವು ಏಳು ಜಿಲ್ಲೆಗಳಲ್ಲಿದ್ದರೆ 5 ವರ್ಷಕ್ಕಿಂತ ಕಿರಿಯ ಮಕ್ಕಳ ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಲಿಂಗತಾರತಮ್ಯವು 12 ಜಿಲ್ಲೆಗಳಲ್ಲಿ ಕಂಡು ಬಂದಿದೆ. ಮಹಿಳೆಯರು ವಯಸ್ಸು ಏರಿದಂತೆ ಅವರು ಬದುಕುಳಿಯುವ ಪ್ರಮಾಣ ಕಡಿಮೆಯಾಗುತ್ತ ನಡೆಯುತ್ತದೆ. ಗಮನಿಸಬೇಕಾದ ಸಂಗತಿಯೆಂದರೆ ಕೇವಲ 35ನೆಯ ವರ್ಷದವರೆಗೆ ಮಾತ್ರ ಮಹಿಳೆಯರು ತೀವ್ರ ತಾರತಮ್ಯವನ್ನು ಎದುರಿಸಬೇಕಾಗುತ್ತದೆ.

## ಸಾಕ್ಷರತೆಯ ಪ್ರಮಾಣ

ಸಾಕ್ಷರತೆಗೆ ಸಂಬಂಧಿಸಿದಂತೆ ತೀವ್ರತರವಾದ ಲಿಂಗ ತಾರತಮ್ಯಗಳು ಕಂಡು ಬರುತ್ತವೆ. ಪುರುಷರ ಸಾಕ್ಷರತೆ ಶೇ. 67.21ರಷ್ಟಿದ್ದರೆ ಮಹಿಳೆಯರ ಸಾಕ್ಷರತೆ ಶೇ. 44.34ರಷ್ಟಿದೆ. ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರ ಸಾಕ್ಷರತೆ ಕೇವಲ ಶೇ. 34.76 ಪರಿಶಿಷ್ಟ ಮಹಿಳೆಯರಲ್ಲಿ ಸಾಕ್ಷರತೆ ಪ್ರಮಾಣ ಶೇ. 25.46 ರಾಜ್ಯದ ಜನಸಂಖ್ಯೆಯಲ್ಲಿ ಸುಮಾರು ಅರ್ಧದಷ್ಟಿರುವ ಮಹಿಳೆಯರು ಅಕ್ಷರಸ್ಥರ ಸಂಖ್ಯೆಯಲ್ಲಿ ಮಾತ್ರ ಕೇವಲ ಶೇ. 38.74 ಪಾಲು ಪಡೆದಿದ್ದಾರೆ. ಆದರೆ ರಾಜ್ಯದ ಒಟ್ಟು ಅನಕ್ಷರಸ್ಥರಲ್ಲಿ ಶೇ. 62ರಷ್ಟು ಮಹಿಳೆಯರಿದ್ದಾರೆ.

## ದುಡಿಮೆ ಮತ್ತು ಮಹಿಳೆ

ಕರ್ನಾಟಕ ರಾಜ್ಯದಲ್ಲಿ ಕೃಷಿಯಲ್ಲಿ ದುಡಿಯುತ್ತಿರುವ ದುಡಿಮೆಗಾರರ ಸಂಖ್ಯೆ 49.99 ಲಕ್ಷ. ಇವರಲ್ಲಿ ಮಹಿಳೆಯರ ಪ್ರಮಾಣ ಶೇ. 49.77. ನಮ್ಮ ಆರ್ಥಿಕತೆಯ ಬೆನ್ನೆಲುಬು ಕೃಷಿಯಾಗಿದ್ದರೆ, ಅದಕ್ಕೆ ಬೆನ್ನೆಲುಬು ಮಹಿಳಾ ಕೃಷಿ ಕಾರ್ಮಿಕರಾಗಿದ್ದಾರೆ. ಮಹಿಳೆಯರಿಗೆ ಸಂಬಂಧಿಸಿದಂತೆ

ಕೊನೆಯ ಪುಟಕ್ಕೆ

**ಬೇರಿನಿಂದ ಫಲಕ್ಕೆ**

ಲೇ : ನೀಳಾದೇವಿ

ಪ್ರ : ಹೇಮಂತ ಸಾಹಿತ್ಯ, 972, 'ಸಿ' 4ನೆಯ 'ಇ' ವಿಭಾಗ, 10 'ಎ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು-560 010

ಬೆಲೆ : ರೂ. 60/-

ಈ ಕೃತಿ ಓದಲಾರಂಭಿಸಿದಾಗ ಮೊದಲ ನೋಟಕ್ಕೆ ಅನಿಸುವುದು ಇದೊಂದು ಐತಿಹಾಸಿಕ ಕಾದಂಬರಿ ಎಂಬುದು. ಅದರ ಜೊತೆ ಜೊತೆಗೆ ಸಾಮಾಜಿಕವೂ, ವ್ಯಕ್ತಿ ಚಿತ್ರಣವೂ ಎಂಬ ಪ್ರಶ್ನೆಗಳೂ ಮೂಡುತ್ತವೆ.

ಲೇಖಕಿ ತಮ್ಮ ತಂದೆಯ ಬಗೆಗೆ ಬರೆಯಲು ಹೊರಟರೂ ಅವರನ್ನು ಪುಸ್ತಕದ ಒಂದು ಮುಖ್ಯ ಬಿಂದುವಾಗಿಟ್ಟು ಕೊಂಡಿದ್ದಾರಷ್ಟೆ, ಇಡೀ ಕೃತಿಯನ್ನು ಅವರೇ ಆವರಿಸಿಲ್ಲ ಎಂಬುದು ಗಮನಾರ್ಹ. ಮೈಸೂರು ಇತಿಹಾಸದ ಪುಟಗಳನ್ನು ತಿರುವಿ ಹಾಕಿದ್ದಾರೆ. ಆ ದಿನಗಳಲ್ಲಿ ಜನಸಾಮಾನ್ಯರ ಬದುಕಿನ ಒಂದು ಒಳನೋಟ ಕಾಣಸಿಗುತ್ತದೆ. ಆರಂಭದಲ್ಲಿ ಇತಿಹಾಸದ ಘಟನೆಗಳಿಗೇ ಹೆಚ್ಚು ಪ್ರಾಧಾನ್ಯ ನೀಡಲಾಗಿದೆ. ನಂತರ ಒಂದು ಕುಟುಂಬದ ಕಥೆಯತ್ತ ಕಾದಂಬರಿ ಹೊರಳುತ್ತದೆ. ಕೊನೆಕೊನೆಗೆ ಇತಿಹಾಸ ಸ್ಪರ್ಶಿಸಿಕೊಂಡು ಹೋಗಿ ಕುಟುಂಬದ ಘಟನೆಗಳತ್ತ ತಿರುವು ಪಡೆದುಕೊಳ್ಳುತ್ತದೆ.

ಒಂದು ಕುಟುಂಬದ ವೃಕ್ಷ ಹೇಗೆ ಕವಲಾಗಿ ಹೋಗಿದೆ ಎಂಬುದನ್ನು ಚಿತ್ರಿಸುತ್ತ ಇಂದು ಮರೆಯಾಗುತ್ತಿರುವ ಒಟ್ಟು ಕುಟುಂಬದ ಸ್ಪಷ್ಟ ರೂಪ ನೀಡುತ್ತಾರೆ. ಇದು ಲೇಖಕಿಯ ತಂದೆ ಮತ್ತು ತಂದೆಯ ಪೂರ್ವಿಕರ ಬಗೆಗೆ ಬರೆದಿರುವ ಕಾದಂಬರಿ ಯಾಗಿರುವುದರಿಂದ ಆ ದಿನಗಳಲ್ಲಿ ಸಾಮಾನ್ಯವಾಗಿದ್ದ ಒಟ್ಟು ಕುಟುಂಬ, ಒಂದೊಂದು ಮರಿಕುಟುಂಬದಲ್ಲೂ ಹತ್ತಾರು ಮರಿ (ಮಕ್ಕಳು)ಗಳ ಬಗೆಗೆ ಸವಿಸ್ತಾರವಾಗಿ ಲೇಖಕಿ ಚಿತ್ರಿಸಿದ್ದಾರೆ. ಇಲ್ಲಿ ಸ್ಪಷ್ಟವಾಗಿ ಎದ್ದು ಕಾಣುವುದು ಮಾನವೀಯ ಮೌಲ್ಯಗಳು. ಇಂದು ಮರೆತು ಹೋಗುತ್ತಿರುವ ಮಾನವೀಯ ಮೌಲ್ಯಗಳ ಬಗೆಗೆ ಮತ್ತೊಮ್ಮೆ ಚಿಂತಿಸುವಂತೆ ಮಾಡಿದೆ. ಮಾನವ ಸಂಬಂಧಗಳು ತಮ್ಮ ಮೌಲ್ಯಗಳನ್ನು ಕಳೆದುಕೊಂಡು ಬಂಡವಾಳಶಾಹಿಯ ಕಪಿಮುಷ್ಟಿಯಲ್ಲಿ ಸಿಲುಕಿ ನರಳುತ್ತಿರುವ ಪ್ರತಿಯೊಬ್ಬ ಪ್ರಜೆಯೂ ಇಂದು ಅಂಥ ಸಾಮಾಜಿಕ ಮೌಲ್ಯಗಳ ಬಗೆಗೆ ಚಿಂತಿಸಬೇಕಾಗಿದೆ. ಅಂಥ ಒಂದು ಪ್ರಯತ್ನವನ್ನಂತೂ ಈ ಕಾದಂಬರಿ ಮಾಡಿದೆ.

ಈ ಕಾದಂಬರಿಯ ಮತ್ತೊಂದು ಪ್ರಮುಖ ಅಂಶವೆಂದರೆ ಗಟ್ಟಿಯಾದ ಸ್ತ್ರೀ ಪಾತ್ರಗಳು. ಯಗ್ಗಮ್ಮ, ಅಂಬುಜಾ, ಪದ್ಮಕ್ಕನಂಥ ಪಾತ್ರಗಳು ಹೇಗೆ ಇಡೀ ಕುಟುಂಬವನ್ನು ನಿಬಾಯಿಸಿದವು ಎಂಬುದನ್ನು ತೋರಿಸಲಾಗಿದೆಯಲ್ಲದೆ ತಮ್ಮ ಮುಂದಿನ ಪೀಳಿಗೆಯ ಭವಿಷ್ಯವನ್ನೂ ಹೇಗೆ ಅವರು ಸಕಾರಾತ್ಮವಾಗಿ ನೋಡಿಕೊಂಡರೆಂಬುದು ವಿಸ್ಮಯ ತರುವ ವಿಷಯವಾಗಿದೆ. ಕೌಟುಂಬಿಕ ದುರಂತಗಳಲ್ಲಿ ಹೆಣ್ಣು ಕುಸಿಯುವುದೇ ಹೆಚ್ಚು; ಅನ್ಯರ ಆಶ್ರಯಕ್ಕೆ ತಲೆಬಾಗುವುದೇ ಅಧಿಕ. ಆದರೆ ಇಲ್ಲಿನ ಪಾತ್ರಗಳು ಅಂಥ ಮಾನಸಿಕ ಕುಸಿತವನ್ನೂ ಕೂಡ ತೋರಿಸುವುದಿಲ್ಲ.

ಅಂದಿನ ಮೈಸೂರು ಪ್ರದೇಶದ ಅಯ್ಯಂಗಾರ್ ಕುಟುಂಬದ ಬಗೆಗಿನ ಚಿತ್ರ ಇದಾಗಿರುವುದರಿಂದ ಭಾಷೆಯ ಬಳಕೆ ಶ್ರೀ ವೈಷ್ಣವರ ಮನೆಯಲ್ಲಿ ಹೆಚ್ಚಾಗಿ ಬಳಸುವುದಾಗಿದೆ. ಜೊತೆಗೆ ಹಬ್ಬಗಳು, ತಿಂಡಿ-ತಿನಿಸುಗಳು, ಆಭರಣಗಳು, ಇತ್ಯಾದಿಗಳ ವರ್ಣನೆ ಕೂಡ ಇದೆ.

ಈ ಕಾದಂಬರಿಯ ಆರಂಭ ಟಿಪ್ಪುಸುಲ್ತಾನನ ಕಾಲದಲ್ಲಿ ನಡೆಯುವುದಾಗಿದೆ. ಅವನ ಸಾಹಸ, ಮತಸಹಿಷ್ಣುತೆಯನ್ನು ಲೇಖಕಿ ಗೌರವಿಸುತ್ತಾರೆ. ಮತಾಂಧರ ಚಿತ್ರಣವೂ ಇದೆ.

'ಈ ಕಥೆ ಬೇರುಬಳ್ಳಿ ನಿಜ. ಆದರೆ ಅಲಂಕರಣ ನನ್ನ ಕೈವಾಡ' ಎಂದು ಲೇಖಕಿ ಹೇಳಿದ್ದಾರೆ. ಈ ಅಲಂಕರಣವನ್ನೂ ಅವರು ಮನಮೋಹಕವಾಗಿ ಮಾಡಿದ್ದಾರೆ.

ಇತ್ತೀಚೆಗೆ ಈ ಕೃತಿಯ ಬಗೆಗೆ ಅವಲೋಕನ ಕಾರ್ಯಕ್ರಮವೊಂದು ನಡೆಯಿತು.

- ಗೌರಿ

## ಕಾಸಿಲ್ಲದ ಕೆಲಸಕ್ಕೆ ಹೆಂಗಸರು!

ಇದು 'ಹೆಂಗಸರ ಕೆಲಸ', ಇದು 'ಗಂಡಸರ ಕೆಲಸ' ಎನ್ನುವುದು ಯಾವುದೂ ಇಲ್ಲ. ಅಡಿಗೆ ಹೆಂಗಸರ ಕೆಲಸ ಅನ್ನುತ್ತಾರೆ, ಆದರೆ ಎಷ್ಟು ಹೋಟೆಲುಗಳಲ್ಲಿ ಪ್ರಮುಖ ಚೆಫ್ ಮಹಿಳೆಯಾಗಿದ್ದಾಳೆ ಹೇಳಿ? ಹಣ ಗಳಿಸುವ ಕೆಲಸವಾದರೆ ಗಂಡಸರು ಅವನ್ನು ಪಡೆದು ಬಿಡುತ್ತಾರೆ. ಸಂಬಳವಿಲ್ಲದ ಮನೆಯ ಕೆಲಸವಾದರೆ ಅದು ಹೆಂಗಸರ ಪಾಲಿಗೆ. ಮಹಿಳೆಯರ ವಿಷಯಗಳನ್ನು ಚರ್ಚಿಸುವ ಇಂಥಾ ಸಭೆಗಳಿಗೆ ಪುರುಷರನ್ನು ಆಹ್ವಾನಿಸಬೇಕು. ಪುರುಷರಿಗೆ ಮಹಿಳಾ ವಿಷಯಗಳನ್ನು ಕುರಿತು ತಿಳಿಸಬೇಕಿದೆ, ಕಲಿಸಬೇಕಿದೆ.

**ಶ್ರೀಮತಿ ರಮಾದೇವಿ**
ಕರ್ನಾಟಕ ರಾಜ್ಯಪಾಲರು

(ಹೊಸ ಸಹಸ್ರಮಾನದಲ್ಲಿ ಉದ್ಯೋಗಸ್ಥ ಮಹಿಳೆಯರ ಸವಾಲುಗಳು - ಸೆಮಿನಾರ್ ಉದ್ಘಾಟಿಸುವಾಗ ಹೇಳಿದ ಮಾತುಗಳು)

# ಭೂಪಾಲ್ ದುರಂತದ ಕರಿನೆರಳಿನಲ್ಲಿ

ಗೀತಾ. ಹೆಚ್. ಎನ್

ಅದೊಂದು ಬೀಗ ಜಡಿದಿರುವ ಕಾರ್ಖಾನೆ. ಕೆಲಸ ಬಂದ್ ಆಗಿ ಮುಚ್ಚಿರುವ ಅನೇಕ ಕಾರ್ಖಾನೆಗಳ ಪೈಕಿ ಇದೂ ಒಂದು ಅನ್ನಿಸುತ್ತದೆ. ಕಾಡುಗಿಡಗಳು ಆವರಿಸಿರುವ ಪಾಳು ಬಿದ್ದ ಜಾಗ. ಮೂಲೆಯಲ್ಲೆಲ್ಲೋ ಒಬ್ಬ ಕಾವಲುಗಾರ. ಅವನ ಮುಖದಲ್ಲಿ ಬೇಸರ-ಒಂಟಿತನ-ನೋವು ! ಇದೇನೂ 'ಸಸ್ಪೆನ್ಸ್' ಚಿತ್ರದ ಕತೆಯಲ್ಲ, ಭೂಪಾಲ್‌ನ ಯೂನಿಯನ್ ಕಾರ್ಬೈಡ್ ಕೀಟನಾಶಕ ಕಾರ್ಖಾನೆಯ ಈಗಿನ ದೃಶ್ಯ. ಕೀಟನಾಶಕಗಳನ್ನು ಉತ್ಪಾದಿಸುವ ಭರದಲ್ಲಿ ಊರಿಗೇ ವಿಷ ಉಣಿಸಿದ ಕಾರ್ಖಾನೆ ಇದು.

ಯಾವುದೇ ಕಾರ್ಖಾನೆ ಬಂದ್ ಆಗಿರುವುದನ್ನು ಕಂಡಾಗ, ಇದು ಮುಚ್ಚಿಹೋಯಿತೇ ? ಪಾಪ, ಇಲ್ಲಿದ್ದವರ ಗತಿ ಏನಾಯಿತೋ ಎಂದು ಎಲ್ಲರೂ ಒಂದು ಕ್ಷಣವಾದರೂ ಚಿಂತಿಸುವುದುಂಟು. ಪರಿತಪಿಸುವುದುಂಟು, ಆದರೆ ಈ ಕಾರ್ಖಾನೆಯ ಬಗ್ಗೆ ಮಾತ್ರ ಯಾರಿಗೂ ಖೇದವಿಲ್ಲ, ಬದಲಿಗೆ ಆಕ್ರೋಶವಿದೆ. ಇಡೀ ಊರಿಗೇ ವಿಷಾನಿಲ ಕುಡಿಸಿದ ಬಗ್ಗೆ ಸಂಕಟವಿದೆ-ನೋವಿದೆ. ಅಷ್ಟೆ, ಬರೀ ನೋವು. ಅಲ್ಲಿನ ಮಹಿಳೆಯರ ಪಾಲಿಗಂತೂ ನೋವೇ ನೋವು. ನಲಿವಿನ ಸುಳಿವೇ ಇಲ್ಲ. ನಲಿವು ಹೇಗೆ ತಾನೆ ಮೂಡುತ್ತದೆ, ಹೇಳಿ.

1984ರ ಡಿಸೆಂಬರ್ 2ರಂದು ನಡೆದ ಭೂಪಾಲ್‌ನ ಕೈಗಾರಿಕಾ ದುರಂತ ಈ ಶತಮಾನದಲ್ಲೇ ಅತ್ಯಂತ ಭೀಕರವಾದದ್ದು. ಈ ದುರಂತದಲ್ಲಿ ಸತ್ತವರ ಪಾಡೇ ಮೇಲು. ಅವರು ಸತ್ತು ಬದುಕಿದರು. ಉಳಿದವರು ಬದುಕಿಯೂ ಸತ್ತರು.

ದುರಂತವಂತೂ ಆಯಿತು. ಆದರ ಹಿನ್ನೆಲೆ - ಅಂಕಿ ಅಂಶಗಳೂ ಬೆಳಕಿಗೆ ಬಂದವು. ಆದರೇನು ? ಅಂಕಿ ಅಂಶಗಳು ಬರೀ ಅಂಕಿ ಅಂಶಗಳಷ್ಟೆ, ದಾಖಲೆಗಳ ಸಲುವಾಗಿ ಮಾತ್ರ; ಚರ್ಚೆಗೆ ಗ್ರಾಹ, ಅಷ್ಟೇ ಬೇಳೆ ಬೇಯಿಸಿಕೊಳ್ಳಬಹುದು, ಬೇಕಿದ್ದವರು. ಅಂಕಿ ಅಂಶಗಳು ಕಾಗದದ ಮೇಲೆ ಕಡತಗಳಲ್ಲಿ ಮಾತ್ರ ಉಳಿದುಕೊಳ್ಳುತ್ತವೆ. ಆದರ ಹಿಂದಿರುವ ವಾಸ್ತವಾಂಶಗಳು ಯಾವ ತಿರುವು ಪಡೆಯುತ್ತವೆ-ಯಾರಿಗೂ ಬೇಕಾಗಿಲ್ಲ. ಈ ತಿರುವುಗಳಾದರೂ ಎಷ್ಟು - ಒಂದೇ ಎರಡೇ !?

ಈ ದುರಂತದಲ್ಲಿ ಬಹಳಷ್ಟು ಜನ ಅಂಗವಿಕಲರಾದರು, ಪುರುಷರಲ್ಲಿ ನಿರ್ವೀರ್ಯತೆ ಹೆಚ್ಚಿದೆ ಎಂದು ಅಧ್ಯಯನಗಳು ಹೇಳುತ್ತವೆ. ಆದರೆ ಈ ದುರಂತದ ಪರಿಣಾಮ ಪರೋಕ್ಷವಾಗಿಯೇ ಆಗಲಿ, ಅಪರೋಕ್ಷವಾಗಿಯೇ ಆಗಲಿ, ಮಹಿಳೆಯರ ಮೇಲೆಯೇ ಹೆಚ್ಚು ಎಂದೂ ಸಹ ಅಧ್ಯಯನಗಳು ತಿಳಿಸುತ್ತವೆ.

ವಿಷಾನಿಲ ಸೋರಿಕೆಯಾದಾಗ ಗರ್ಭಿಣಿ ಸ್ತ್ರೀಯರಿಗೆ ಒಮ್ಮಿಂದೊಮ್ಮೆಗೆ ಗರ್ಭಪಾತಗಳಾದವು. ಅನೇಕ ಮಹಿಳೆಯರು ಸಂತಾನೋತ್ಪತ್ತಿಯ ಶಕ್ತಿಯನ್ನೇ ಕಳೆದುಕೊಂಡರು. ಇದೇ ಕಾರಣಕ್ಕಾಗಿಯೇ, ಅಂದರೆ ಮಗುವನ್ನು ಹೆರಲಾಗದ ಕಾರಣಕ್ಕಾಗಿಯೇ ಅವರ ಕುಟುಂಬದವರೂ ಅವರನ್ನು ಸಾರಾಸಗಟಾಗಿ ತ್ಯಜಿಸಿದರು. ಈ ರೀತಿಯ ದೈಹಿಕ, ಸಾಮಾಜಿಕ ಹಾಗೂ ಆರ್ಥಿಕ ಏರುಪೇರುಗಳಿಂದಾಗಿ ಹೆಚ್ಚಿನ ಮಂದಿ ಮಾನಸಿಕವಾಗಿಯೂ ಅಸ್ವಸ್ಥರಾದರು. ಭೂಪಾಲನ ಹುಡುಗಿಯರನ್ನು ಮದುವೆಯಾಗಲೂ ಯಾರೂ ತಯಾರಿಲ್ಲ, ಅವರಲ್ಲಿರ ಬಹುದಾದ ವಿಷ ಮುಂದಿನ ತಲೆಮಾರಿಗೂ ಬಂದೀತೆನ್ನುವ ಭೀತಿ ಇವರಿಗೆ. ಮಹಿಳೆಯರೆಂದರೆ ಮೊದಲೇ ಕಟ್ಟು ಪಾಡುಗಳು. ಕಂದಾಚಾರಗಳು ಜಾಸ್ತಿ. ಈ ದುರಂತ ಒಂದು ರೀತಿಯಲ್ಲಿ ಅವನ್ನು ಇಮ್ಮಡಿಗೊಳಿಸಿದೆ.

ಭೂಪಾಲ್‌ನಲ್ಲಿ ನಿರ್ವೀಯತೆಗೆ ಒಳಗಾದ ಗಂಡಸರು ಶರಾಬಿಗೇ ಮೊರೆ ಹೋಗುತ್ತಾರೆ. ಮುಗಿಯಿತಲ್ಲ ಕತೆ-ಆರಂಭವಾಯಿತಲ್ಲ ಅದೇ ದೃಶ್ಯ. ಉಪವಾಸವಿರುವ ಹೆಂಡತಿ, ಮಕ್ಕಳು, ಹೊಡೆತ-ಬಡಿತ. ಇದು ಪುರುಷರ ಮೇಲೆ ವಿಷಾನಿಲ ಬೀರಿದ ದುಷ್ಪರಿಣಾಮದ ಒಂದು ಚಿತ್ರಣ. ಮತ್ತೊಂದು ಚಿತ್ರಣ ಹೀಗಿದೆ - ಅವಳು 20 ವರ್ಷದ ಯುವತಿ. ಮದುವೆಯಾಗಿ ಎರಡು ಮಕ್ಕಳಿವೆ. ದುರಂತದ ಸಮಯದಲ್ಲಿ ಅವಳು ನಾಲ್ಕು ವರ್ಷದ ಹುಡುಗಿ. ವಿಷಾನಿಲ ಅವಳಿಗೆ ಕ್ಷಯ ರೋಗವನ್ನು ದಯಪಾಲಿಸಿದೆ. ಅವಳಿಗೆ ಕ್ಷಯ ಎಂದು ಗೊತ್ತಾದ ತಕ್ಷಣವೇ ಗಂಡ ಅವಳ ಕೈಬಿಟ್ಟಿದ್ದಾನೆ. ಅವಳು ಗುಣಮುಖಳಾಗಲು ಇನ್ನಾರು ತಿಂಗಳಾದರೂ ಬಿಡದೇ ಔಷಧಿ ತೆಗೆದುಕೊಳ್ಳಬೇಕು. ಅದಕ್ಕೆ ತಿಂಗಳಿಗೆ ಬೇಕಾಗುವ 600 ರೂ.ಗಳನ್ನು ನಾನೆಲ್ಲಿಂದ ಹೊಂದಿಸಲಿ ಎಂದವಳು ಹೇಳುತ್ತಾಳೆ.

ಇದು ಕೇವಲ ಬೆಣ್ಣೆ-ಸುಣ್ಣಗಳ ಉದಾಹರಣೆಗಳು. ಆದರೆ ಭೂಪಾಲದ ಮನೆಗಳಲ್ಲಿ ಇದು ಸರ್ವೇ ಸಾಧಾರಣ ಕತೆ. ಯೂನಿಯನ್ ಕಾರ್ಬೈಡ್ ಕಾರ್ಖಾನೆಯೇನೋ ಭಾರತದಲ್ಲಿ ಬಾಗಿಲು ಮುಚ್ಚಿತು. ಭೂಪಾಲ್‌ನ ಜನರ ದಿಕ್ಕು ದೆಸೆಯನ್ನೇ ಬದಲಿಸಿತು.

ಕಾರ್ಖಾನೆ ಬಾಗಿಲನ್ನೇನೋ ಮುಚ್ಚಿತು. ಆದರೆ ಅಲ್ಲಿಯೇ ಪೇರಿಸಿಟ್ಟಿದ್ದ ರಾಸಾಯನಿಕಗಳು ಕರಗುತ್ತ ಕರಗುತ್ತ

ಅಂತರ್ಜಲವನ್ನು ಹೊಕ್ಕವು. ಕೊಳವೆ ಬಾವಿಗಳ ಮೂಲಕ ಮತ್ತೆ ಮನೆಮನೆಗೂ ಹೋಗುತ್ತಿವೆ: ಮತ್ತಷ್ಟು ಮಗದಷ್ಟು ನಂಜುಣಿಸುತ್ತಿವೆ.

ಆದರೂ ನಂಜು ತುಂಬಿರುವ ಭೂಪಾಲದ ಮಹಿಳೆಯರಲ್ಲಿ ಕೆಚ್ಚು ಇದೆ. ತಮಗಾಗಿರುವ ಅನ್ಯಾಯಗಳ ವಿರುದ್ಧ ಪ್ರತಿಭಟನೆ ಪ್ರದರ್ಶನಗಳಲ್ಲಿ ಭಾಗವಹಿಸುತ್ತಾರೆ ಸಂಪ್ರದಾಯಗಳ ಮುಸುಕು ಕಿತ್ತೆಸೆದಿದ್ದಾರೆ.

ನಾವು ಭೂಪಾಲದ ಮಹಿಳೆಯರು
ನಾವು ಕುಸುಮಗಳಲ್ಲ - ಕಿಡಿಗಳು
ಎಂದು ಆವೇಶದಿಂದ ಹಾಡುತ್ತಾರೆ.

ಭೂಪಾಲ್‌ನಲ್ಲಿ ದುರಂತವಾಗಿ 16 ವರ್ಷಗಳೇ ಕಳೆದಿರಬಹುದು. ಆದರೆ ಈ ನೆಲದಲ್ಲಿನ್ನೂ ವಿಷವಿದೆ. ಗಾಳಿ-ನೀರುಗಳಲ್ಲೂ ವಿಷವಿದೆ.

---

**Statemant about ownership and other particulars about newspaper ACHALA**
**Form IV (See Rule 8)**

| | | |
|---|---|---|
| **1. Place of Publication** | : | *Bangalore, Karnataka State* |
| **2. Periodicity of Publication** | : | *Monthly* |
| **3. Printer's Name, Address** | : | *Lipi Mudrana, Gandhibazar, Basavanagudi, Bangalore - 560 004* |
| **4. Publisher's Name** | : | *Dr. G. Ramakrishna for Jagruthi Mahila Adhyayana Kendra, Bangalore* |
| **Nationality** | : | *Indian* |
| **Address** | : | *108, Skyline Surabhi, 14-P, Vidyapeeta Road, B.S.K. III Stage, Bangalore - 560 085* |
| **5. Editor's Name** | : | *Dr. N. Gayathri 108, Skyline Surabhi, 14-P, Vidyapeeta Road, B.S.K. III Stage, Bangalore - 560 085* |
| **6. Name & Address of Individulas who own the Newspaper** | : | *Jagruthi Mahila Adhyayana Kendra, 108, Skyline Surabhi, 14-P, Vidyapeeta Road, B.S.K. III Stage, Bangalore - 560 085* |

I Dr. G. Ramakrishna, hereby declare that the particulars given above are true to the best of my knowledge and belief.

**Bangalore**
**25-2-2000**

**Sd/-**
**G. Ramakrishna**

# ನಮ್ಮ ಹೆಮ್ಮೆಯ ನಾಡು - ಕರ್ನಾಟಕ

ಎರಡು ಸಾವಿರ ವರ್ಷಗಳ ಭವ್ಯ ಇತಿಹಾಸ ಪರಂಪರೆ ಪುಣ್ಯ ಭೂಮಿ ಕರ್ನಾಟಕ. ಇದು ವಿವಿಧ ಮತ ಧರ್ಮಗಳ ಸಂಗಮ. ಉದಾತ್ತ ದಾರ್ಶನಿಕರ ಮತ್ತು ಮಹಾನ್ ಸಾಹಿತಿಗಳ ನೆಲೆವೀಡು. ರಾಷ್ಟ್ರದ ಸರ್ವತೋಮುಖ ಪ್ರಗತಿಗೆ ಕರ್ನಾಟಕದ ಕೊಡುಗೆ ಗಣನೀಯ. ರಾಷ್ಟ್ರ ನಿರ್ಮಾಣದ ಮಹತ್ಕಾರ್ಯವನ್ನು ಮುಂದುವರಿಸುವುದು ನಮ್ಮೆಲ್ಲರ ಕರ್ತವ್ಯ.

ದಾರ್ಶನಿಕರು, ಸಮಾಜ ಸುಧಾರಕರು, ಸಾಹಿತಿಗಳು, ವಿಜ್ಞಾನಿಗಳು ಕರ್ನಾಟಕವನ್ನು ಶ್ರೀಮಂತಗೊಳಿಸಿದ್ದಾರೆ.

''ಮಾನವ ಜಾತಿ ತಾನೊಂದೆ ವಲಂ''
-ಪಂಪ

''ಸರ್ವಜ್ಞನೆಂಬುವನು ಗರ್ವದಿಂದಾವನೆ
ಸರ್ವರೊಳೊಂದೊಂದು ನುಡಿಗಲಿತು
ವಿದ್ಯದ ಪರ್ವತವೆ ಆದ ಸರ್ವಜ್ಞ''
-ಸರ್ವಜ್ಞ

''ಒಂದೇ ಕರ್ನಾಟಕ ಒಂದೇ
ಇಂದೆ, ಹಿಂದೆ, ಮುಂದೆ
ಒಂದೇ ಕರ್ನಾಟಕ ಒಂದೆ.''
-ದ.ರಾ. ಬೇಂದ್ರೆ

''ಎಲ್ಲರೂ ದೇಶಾಭಿಮಾನದಿಂದ
ಸೇವಾ ಪ್ರೇಮದಿಂದ ಕರ್ನಾಟಕ ಸಂಸ್ಕೃತಿ
ಭಾಷೆಗಳ ಸದಭಿಮಾನದಿಂದ ಪ್ರೇರಿತರಾದರೆ
ಅವರು ಹೆಚ್ಚು ಹೆಚ್ಚು ಸುಖಿಗಳಾಗುವರು''
-ಸರ್. ಎಂ. ವಿಶ್ವೇಶ್ವರಯ್ಯ

''ಬರಿಯ ಚದರ ಮೈಲಿಗಳಲ್ಲು
ಕರ್ನಾಟಕ ದೇಶ ವಿಸ್ತೀರ್ಣಂ ನೆನೆ, ನೆನೆ
ಮನೋಮಯದ ಸಂಸ್ಕೃತಿಯ ಕೋಶ
ವಿಸ್ತೀರ್ಣಮಂ ಮರೆಯಲು ಪರ
ಸಂವತ್ಸರದ ಶತಮಾನಗಳ ಕಾಲ
ವಿಸ್ತೀರ್ಣಮಂ ಪ್ರಾಣಮಯ ಭಾವಮಯ
ವಿಸ್ತೀರ್ಣಮಂ ಚಿದಾಕಾಶ ವಿಜ್ಞಾನ
ವಿಸ್ತೀರ್ಣಮಂ.''
-ಕುವೆಂಪು

''ಈಸಬೇಕು ಇದ್ದು ಜೈಸಬೇಕು''
-ಪುರಂದರದಾಸರು

''ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಯಾವುದಯ್ಯಾ''
-ಕನಕದಾಸರು

''ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ
ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ, ತನ್ನ
ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ
ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ ಇದೇ
ನಮ್ಮ ಕೂಡಲಸಂಗಮ ದೇವರನೊಲಿಸುವ ಪರಿ''
-ಬಸವಣ್ಣ

''ನರಕಕ್ಕಿಳ್ಸಿ ನಾಲ್ಗೆ ಸೀಳ್ಸಿ
ಬಾಯೊಲ್ಸಾಕಿದ್ರೂನೆ ಮೂಗ್ನಲ್ ಕನ್ನಡ
ಪದಗಳ್ನಾಡ್ತೀನಿ ನನ್ನ ಮನಸ್ನ ನೀಕಾಣೆ
-ಜಿ.ಪಿ ರಾಜರತ್ನಂ

''ಕರ್ನಾಟಕತ್ವವೆಂದರೆ ಕೇವಲ ದೇಶಾಭಿಮಾನವಲ್ಲ
ಕೇವಲ ಭಾಷಾಭಿಮಾನವಲ್ಲ, ಇವೆಲ್ಲವುಗಳನ್ನು
ಮೀರಿದ ಇವೆಲ್ಲವುಗಳನ್ನು ಒಳಗೊಂಡ
ಪರಿಶುದ್ಧ ಭಾವನೆ.''
-ಆಲೂರು ವೆಂಕಟರಾಯರು

''ಹಸಿರಾಯಿತು ಕರ್ನಾಟಕ
ಉಸಿರಾಗಲಿ ಕನ್ನಡ''
-ಚನ್ನವೀರ ಕಣವಿ

8ನೇ ಪುಟದಿಂದ......

ಎಂಟು ಲಕ್ಷವನ್ನು ತಲೆಯ ಮೇಲೆ ಹೊತ್ತ ದಾರಾಸಿಂಗ್ ಅನ್ನು ಕಡೆಗೂ ಪೋಲೀಸರು ಹಿಡಿದಿದ್ದಾರೆ. ಆತನನ್ನು ಎಂದೋ. ಕ್ಷಮಿಸಿರುವ ಗ್ಲಾಡೀಸ್ ಸ್ಟೇನ್, ಪೋಲಿಸರು ಆತನನ್ನು ಬಂಧಿಸಿದ ಸುದ್ದಿಯನ್ನು ಯಾವುದೇ ಭಾವೋದ್ರೇಕವಿಲ್ಲದ ಸಮಾಧಾನವಾಗಿ ಸ್ವೀಕರಿಸಿದ್ದಾರೆ. 'ಆತನನ್ನು ಹಿಡಿಯದಿದ್ದರೆ ಮತ್ತಷ್ಟು ಜನರನ್ನು ಆತ ಕೊಲ್ಲುತ್ತಿದ್ದ' ಎಂಬುದಷ್ಟೆ ಅವರು ಹೇಳಿದ ಮಾತು. 'ನಾನಾತನನ್ನು ಎಂದೋ ಕ್ಷಮಿಸಿದ್ದೇನೆ. ನಾನು ಆತನನ್ನು ಭೇಟಿಯಾದರೆ ದೇವರಲ್ಲಿ ಕ್ಷಮೆ ಯಾಚಿಸಲು ಹೇಳುತ್ತೇನೆ. ತನ್ನನ್ನು ಬದಲಾಯಿಸಿಕೊಳ್ಳಲು ಕೇಳುತ್ತೇನೆ. ದೇಶದ ಕಾನೂನು ತನ್ನ ಹಾದಿಯನ್ನು ಹಿಡಿಯಲಿ ಎಂದಷ್ಟೆ ಗ್ಲಾಡೀಸ್ ಹೇಳಿದ್ದಾರೆ.

ತನ್ನನ್ನು 'ಓರ್ವ ಸಾಧಾರಣ ಮಹಿಳೆ' ಎಂದು ಗುರುತಿಸಿಕೊಳ್ಳುವ ಈ ಅಸಾಧಾರಣ ಮಹಿಳೆ, ದುರಂತದ ಅಂಚಿನಲ್ಲೂ, ಅಗಾಧ ಸಂಯಮ, ಮತ್ತು ಅಷ್ಟೇ ಆತ್ಮಸ್ಥೈರ್ಯವನ್ನು ತೋರಿ ನಿಜವಾದ ಸ್ತ್ರೀ ಶಕ್ತಿಯ ಪ್ರತೀಕವಾಗಿದ್ದಾರೆ.

---

9ನೆ ಪುಟದಿಂದ

ಕೃಷಿಯ ಅವಲಂಬನೆ ಶೇ. 75.40ರಷ್ಟಾದರೆ ಪುರುಷರಲ್ಲಿ ಕೇವಲ ಶೇ. 58.12.

ಮಹಿಳೆಯರ ದುಡಿಮೆ ಮೂರು ಬಗೆಯದಾಗಿರುತ್ತದೆ. ಮೊದಲನೆಯದು ಉತ್ಪನ್ನಕಾರಕ ದುಡಿಮೆ. ಎರಡನೆಯದು ಕೌಟುಂಬಿಕ ದುಡಿಮೆ. ಮೂರನೆಯದು ಸಂತಾನೋತ್ಪತ್ತಿ ದುಡಿಮೆ. ಈ ಮೂರರಲ್ಲಿ ಕೊನೆಯ ಎರಡು ಬಗೆಯ ದುಡಿಮೆ ಅದೃಶ್ಯ ರೂಪದಲ್ಲಿ ಹಾಗೂ ಕ್ರಿಯರಹಿತ ರೂಪದಲ್ಲಿ ಇರುತ್ತದೆ. ಒಂದು ದಿನದ 24 ಗಂಟೆಗಳಲ್ಲಿ ಹೆಚ್ಚು ಗಂಟೆಗಳ ಕಾಲ ದುಡಿಯುವವರು ಮಹಿಳೆಯರಾಗಿದ್ದಾರೆ. ಹೀಗಾಗಿ ಎಂಟು ಗಂಟೆಗಳ ದುಡಿಮೆ ದಿನಗಳ ದೃಷ್ಟಿಯಿಂದ ಮಹಿಳೆಯರು, ಅದರಲ್ಲೂ ಕೃಷಿಯಲ್ಲಿ ಕೂಲಿಯಾಳುಗಳಾಗಿ ದುಡಿಯುವ ಹೆಣ್ಣು ಮಕ್ಕಳು, ಪ್ರತಿದಿನ 'ಎರಡು ದುಡಿಮೆ'ಗಳಿಂದ ಬದುಕುತ್ತಿದ್ದಾರೆ.

- ಕೃಪೆ : 'ಹೊಸತು' ಮಾಸ ಪತ್ರಿಕೆ

CPMG/KA/BG-8/99

"Achala" 108, Skyline Surabhi,
14-9, Vidyapeeta Road, BSK III Stage,
Bangalore - 560 085

To :

Smt/Sri

Book-Post/News Letter